KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಮೇ ೭, ೨೦೦೯ (ವೈಶಾಖ ೧೭, ಶಕ ವರ್ಷ ೧೯೩೧) | ಸಂಚಿಕೆ ೧೯ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಕೆ.ಸತ್ಯನಾರಾಯಣಾಚಾರ್, ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿ, ದಾವಣಗೆರೆ, ಇವರ ಅಮಾನತ್ತಿನ ಆದೇಶವನ್ನು ರದ್ದುಪಡಿಸಿ ಸೇವೆಗೆ ಪುನರ್ ಸ್ಥಾಪಿಸುವ ಕುರಿತು–ಆದೇಶ.

**ಓದಲಾಗಿದೆ:**
1. ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ದಾವಣಗೆರೆ, ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ:D.D.Dvg/WCD/D.W/07-08/3965 dt:19.03.2008.
2. ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ದಾವಣಗೆರೆ, ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ:ಉನಿಧಾ/ಮಮಇ/ಅಂಕ/08–09 ದಿ:28.06.2008.
3. ಸರ್ಕಾರದ ಆದೇಶ ಸಂಖ್ಯೆ: ಮಮಇ 151 ಎಸ್‌ಜೆಡಿ 2008 ದಿ: 10.7.2008.
4. ಶ್ರೀ ಕೆ.ಸತ್ಯನಾರಾಯಣಾಚಾರ್, ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿ, ದಾವಣಗೆರೆ (ಅಮಾನತ್ತಿನಲ್ಲಿರವವರು) ಇವರು ಮಾನ್ಯ ಮುಖ್ಯಮಂತ್ರಿಗಳಿಗೆ ಹೆಸರಿಸಿರುವ ಮನವಿ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 19.03.2008ರ ಪತ್ರ ಹಾಗೂ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿ: 28.06.2008ರ ಉಪನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ದಾವಣಗೆರೆ, ಇವರ ಪತ್ರಗಳಲ್ಲಿ ಶ್ರೀ ಕೆ.ಆರ್. ಸತ್ಯನಾರಾಯಣಾಚಾರ್, ಜಿಲ್ಲಾ ಅಂಗವಿಕಲ ಮತ್ತು ಹಿರಿಯ ನಾಗರೀಕರ ಕಲ್ಯಾಣಾಧಿಕಾರಿ, ದಾವಣಗೆರೆ, ಇವರು ಸ್ವತಂತ್ರ ಅಧಿಕಾರಿಯಾಗಿ ಅವರ ಹಂತದಲೇ ನೇರವಾಗಿ ಜಿಲ್ಲಾ ಪಂಚಾಯತ್, ಜಿಲ್ಲಾಧಿಕಾರಿ ಹಾಗೂ ನಿರ್ದೇಶನಾಲಯದೊಂದಿಗೆ ವ್ಯವಹರಿಸುತ್ತಿದ್ದಾರೆಂದು ಈ ಬಗ್ಗೆ ಅವರಿಗೆ ಮೆಮೋ/ಪತ್ರಗಳನ್ನು ನೀಡಿದ್ದರೂ ಸಹ, ನಿರ್ದೇಶನಾಲಯವು ಅವರಿಗೆ ಅವರ ಈ ನಡವಳಿಕೆಗೆ ಬೆಂಬಲ ಸೂಚಿಸುತ್ತಿದೆಯೆಂದೂ, ಸದರಿಯವರು ಉಪನಿರ್ದೇಶಕರ ಅನುಮತಿ/ಒಪ್ಪಿಗೆ ಇಲ್ಲದೆ ಎನ್.ಜಿ.ಓ.ಗಳಿಗೆ ಅನುದಾನ ಬಿಡುಗಡೆಗೊಳಿಸುವ ಪ್ರಸ್ತಾವನೆಯನ್ನು ಅಂದರೆ ವೃದ್ಧಾಶ್ರಮ, ವಸತಿಗೃಹ, ಅಶಕ್ತ ಬಾಲಕರ ಶಾಲೆಗಳು, ಡೈರಿ, ಟಿ.ಟಿ.ಪಿ. ಮುಂತಾದವುಗಳನ್ನು ನೇರವಾಗಿ ಜಿಲ್ಲಾ ಪಂಚಾಯತ್ ಮತ್ತು ನಿರ್ದೇಶನಾಲಯಕ್ಕೆ ಸಲ್ಲಿಸುತ್ತಿದ್ದಾರೆಂದು ಹಾಗೂ ಉಪನಿರ್ದೇಶಕರ ಅನುಮತಿ ಇಲ್ಲದೆ ರಜೆ ಮೇಲೆ ತೆರಳುತ್ತಿರುತ್ತಾರೆಂದು ಉಪನಿರ್ದೇಶಕರಿಗೆ ತಿಳಿಸದೆ ಸರ್ಕಾರೇತರ ಸಂಸ್ಥೆಗಳು ಆಚರಿಸುತ್ತಿರುವ C.B.R. ನೆಟ್‌ವರ್ಕ್ಸ್ ಪ್ರೋಗ್ರಾಮ್ಸ್ ಮತ್ತು A.D.I.P. ಕ್ಯಾಂಪಿಯನ್ ಪ್ರೋಗ್ರಾಂಗಳ ಬಗ್ಗೆ ನೇರವಾಗಿ ನೇಮಕಾತಿ ಆದೇಶಗಳನ್ನು VRW's ಮತ್ತು MRW's ಗಳಿಗೆ ನೀಡಿರುತ್ತಾರೆಂದು, C.B.R. ಮತ್ತು A.D.I.P. ಪ್ರಗತಿಗಳ ಬಗ್ಗೆ ನಿರ್ದೇಶನಾಲಯವು ಮಂಜೂರಾತಿ ಆದೇಶ ಹೊರಡಿಸಿ ಪ್ರತಿಯನ್ನು ಉಪನಿರ್ದೇಶಕರಿಗೆ ಗುರುತಿಸಿದಾಗಲೇ ಉಪನಿರ್ದೇಶಕರ ಗಮನಕ್ಕೆ ಬಂದದ್ದು, ಉಪನಿರ್ದೇಶಕರು, ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳಿಗೆ ಅನೇಕ ನೋಟೀಸ್‌ಗಳನ್ನು ಜಾರಿ ಮಾಡಿದಾಗ ಅವರು ಉತ್ತರಿಸಿರುವುದಿಲ್ಲವೆಂದು ಈ ಬಗ್ಗೆ

ನಿರ್ದೇಶನಾಲಯವು ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳ ಬಗ್ಗೆ ಯಾವುದೇ ಕ್ರಮ ಜರುಗಿಸಿರುವುದಿಲ್ಲವೆಂದು ಹಾಗೂ ಉಪನಿರ್ದೇಶಕರು ಬರೆದ ಪತ್ರಗಳನ್ನು ಕಡೆಗಣಿಸಿರುವುದರಿಂದ, ಜಿಲ್ಲಾ ಮಟ್ಟದಲ್ಲಿ ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ಚಟುವಟಿಕೆಗಳನ್ನು ಮೇಲ್ವಿಚಾರಣೆ ನಡೆಸಿ ಜಾರಿಗೊಳಿಸಲು ಉಪನಿರ್ದೇಶಕರು ದುರ್ಬಲರಾಗಿರುತ್ತಾರೆಂದು ವರದಿಯಾಗಿದೆ.

ಮುಂದುವರೆದು ನಿರ್ದೇಶನಾಲಯವು, ಉಪನಿರ್ದೇಶಕರಿಗೆ ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು ಸಲ್ಲಿಸುವ ಬಿಲ್ಲುಗಳಿಗೆ ಅಂದರೆ ಹಾಸ್ಟಲ್, ತರಬೇತಿ ಕೇಂದ್ರ, ಹಿರಿಯ ನಾಗರೀಕರ ಕೇಂದ್ರಗಳು ಪಾಲನೆ ಕೇಂದ್ರಗಳು, A.D.I.P. ಕಾರ್ಯಕ್ರಮಗಳು, C.B.R. ಕಾರ್ಯಕ್ರಮಗಳು, ಹಾಗೂ ಇತರೆ ಕಾರ್ಯಕ್ರಮಗಳನ್ನು ಜಿಲ್ಲಾ ಹಂತದಲ್ಲಿ ಪಾಲಿಸುವ ಬಗ್ಗೆ ಕೌಂಟರ್ ಸಿಗ್ನೇಚರ್ ಮಾಡಲು ಮಾತ್ರ ಅಧಿಕಾರ ನೀಡಿರುತ್ತದೆಂದು, ಫಲಾನುಭವಿಗಳ ಆಯ್ಕೆ ಬಗ್ಗೆ ಹಾಗೂ ಹಾಸ್ಟೆಲ್ ಮತ್ತು ತರಬೇತಿ ಕೇಂದ್ರಗಳ ಸಿಬ್ಬಂದಿಗಳ ಆಯ್ಕೆ ಬಗ್ಗೆ ಉಪನಿರ್ದೇಶಕರಿಗೆ ಅಧಿಕಾರ ನೀಡಿರುವುದಿಲ್ಲವೆಂದು, ನಿರ್ದೇಶನಾಲಯವು ಮಂಜೂರಾತಿ ಆದೇಶದ ಪ್ರತಿಯನ್ನು ಕಳುಹಿಸಿ ಬಿಲ್ಲುಗಳಿಗೆ ಮೇಲು ಸಹಿ ಮಾಡಲು ಉಪನಿರ್ದೇಶಕರಿಗೆ ಕಳುಹಿಸಿದಾಗ, ಸಾರ್ವಜನಿಕ ಹಿತದೃಷ್ಟಿಯಿಂದ ಉಪನಿರ್ದೇಶಕರು ಮೇಲು ಸಹಿ ಮಾಡಿರುವುದಾಗಿ ವರದಿಯಾಗಿದೆ.

ಉಪನಿರ್ದೇಶಕರು, ಅಂಗವಿಕಲರ ಕೋಶಕ್ಕೆ ಕಛೇರಿ ಸ್ಥಳಾವಕಾಶ ಮತ್ತು ಗಣಕ ಯಂತ್ರ ಮತ್ತು ಇತರೆ ಸಹಕಾರಗಳನ್ನು ನೀಡುತ್ತಿದ್ದು, ಈ ಎಲ್ಲಾ ಮಾಹಿತಿಗಳನ್ನು ಹಿಂದಿನ ಅಂಗವಿಕಲರ ಕಲ್ಯಾಣ ಇಲಾಖೆಯ ನಿರ್ದೇಶಕರುಗಳಾದ ಶ್ರೀ ಅಶೋಕ್, ಶ್ರೀ ವಿ.ರಾಮರೆಡ್ಡಿ, ಮತ್ತು ಶ್ರೀ ಎಂ.ವಿ.ವೇದಮೂರ್ತಿ, ಇವರುಗಳಿಗೆ ಅರೆ ಸರ್ಕಾರಿ ಪತ್ರದ ಮುಖಾಂತರ ಮತ್ತು ದೂರವಾಣಿ ಮುಖಾಂತರ ನೀಡಲಾಗಿದೆಯೆಂದು ಹಾಗೂ 3 ತಿಂಗಳ ಹಿಂದೆ ನಿರ್ದೇಶಕರು ದಾವಣಗೆರೆ ಜಿಲ್ಲೆಗೆ ಭೇಟಿ ನೀಡಿದ ಸಮಯದಲ್ಲಿಯೂ ಸಹ ಚರ್ಚಿಸಲಾಗಿದೆಯೆಂದು, ಆದರೆ ಯಾವುದೇ ಪ್ರಗತಿ ದೊರಕಿಲ್ಲವೆಂದು ವರದಿ ಮಾಡಿದ್ದಾರೆ.

ಮಹಾತ್ಮಗಾಂಧಿ ವೃದ್ಧಾಶ್ರಮ ದಾವಣಗೆರೆಗೆ ಉಪನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ದಾವಣಗೆರೆರವರು ಭೇಟಿ ನೀಡಿದ ಸಂದರ್ಭದಲ್ಲಿ ಕೆಲವೊಂದು ನ್ಯೂನತೆಗಳು ಕಂಡು ಬಂದ ಹಿನ್ನೆಲೆಯಲ್ಲಿ ಶ್ರೀ ಕೆ. ಸತ್ಯನಾರಾಯಣಾಚಾರ್, ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ, ದಾವಣಗೆರೆ, ಇವರಿಗೆ ಸೂಕ್ತ ತಿಳುವಳಿಕೆ ನೀಡುವಂತೆ ಅಥವಾ ಇವರ ವಿರುದ್ಧ ಶಿಸ್ತುಕ್ರಮ ಜರುಗಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಉಪನಿರ್ದೇಶಕರು ನೀಡಿರುವ ವರದಿಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ದಿ:10.07.008ರ ಆದೇಶದಲ್ಲಿ ಶ್ರೀ ಕೆ.ಸತ್ಯನಾರಾಯಣಾಚಾರ್, ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿ, ದಾವಣಗೆರೆ, ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತುಗೊಳಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಮನವಿಯಲ್ಲಿ ಶ್ರೀ ಕೆ.ಸತ್ಯನಾರಾಯಣಾಚಾರ್, ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು (ಅಮಾನತ್ತಿನಲ್ಲಿರುವವರು), ರವರ ಮನವಿಯಲ್ಲಿ ದೂರುಗಳ ಬಗ್ಗೆ ಸೂಕ್ತ ಸಮಜಾಯಿಷಿಯನ್ನು ಪ್ರಧಾನ ಕಾರ್ಯದರ್ಶಿಗಳು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರಿಗೆ ನೀಡಾಗಿದ್ದು, ಸದರಿ ಸಮಜಾಯಿಷಿಯ ಬಗ್ಗೆ ದೂರು ನೀಡಿದ ಉಪನಿರ್ದೇಶಕರಿಂದಲೇ ಕಾಮೆಂಟ್ ತರಿಸಿಕೊಂಡು ಅವರ ಸಮಜಾಯಿಷಿಯನ್ನು ಪರಿಗಣಿಸದೆ ದುರ್ನಡತೆ ಕಾರಣದಿಂದ ಅವರನ್ನು ಅಮಾನತ್ತುಗೊಳಿಸಿದ್ದು, ಕಛೇರಿಯಲ್ಲಿ ಅವರು ಕೈಗೊಂಡ ಕ್ರಮಗಳು ಸಾರ್ವಜನಿಕ ಹಿತಾಸಕ್ತಿಗೆ ಪೂರಕವಾಗಿದ್ದು ಅವರು ನಡೆಸಿದ ಪತ್ರ ವ್ಯವಹಾರಗಳಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವೆಂದು ಅಲ್ಲದೆ ಸಾರ್ವಜನಿಕರಿಗೆ ಅನುಕೂಲಕರ ಅಂಶಗಳಾಗಿರುವುದರಿಂದ ಅವರ ನಿಷ್ಠಾವಂತ ಸೇವೆಯನ್ನು ಪರಿಗಣಿಸಿ ಅವರನ್ನು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ಹಿಂತೆಗೆದುಕೊಂಡು ಅವರು ಈ ಹಿಂದೆ ಕಾರ್ಯನಿರ್ವಹಿಸುತ್ತಿದ್ದ ಸ್ಥಳದಲ್ಲಿಯೇ ಪುನರ್ ನೇಮಕ ಮಾಡಲು ಸಂಬಂಧಿಸಿದ ಅಧಿಕಾರಿಗಳಿಗೆ ನಿರ್ದೇಶನ ನೀಡಬೇಕೆಂದು ಕೋರಿರುತ್ತಾರೆ.

ಸರ್ಕಾರವು ಶ್ರೀ ಕೆ. ಸತ್ಯಾನಾರಾಯಣಾಚಾರ್, ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿ, ದಾವಣಗೆರೆ, ಇವರನ್ನು ಅಮಾನತ್ತುಗೊಳಿಸಿ ಈಗಾಗಲೇ 6 ತಿಂಗಳುಗಳು ಕಳೆದಿರುವುದರಿಂದ ಸದರಿಯವರನ್ನು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 151 ಎಸ್‌ಜೆಡಿ 2008, ಬೆಂಗಳೂರು, ದಿನಾಂಕ: 28ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಕೆ. ಸತ್ಯನಾರಾಯಣಾಚಾರ್, ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿ, ದಾವಣಗೆರೆ ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ದಿ:10.07.2008 ರಂದು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಿ ಅವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಗೆ ಪುನರ್ ಸ್ಥಾಪಿಸಿ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ, ದಾವಣಗೆರೆ ಇಲ್ಲಿನ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನರಸಿಂಹಯ್ಯ**

ಪಿ.ಆರ್. 519

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ),

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**INFORMATION TECHNOLOGY, BIO TECHNOLOGY & SCIENCE & TECHNOLOGY SECRETARIAT**

**Sub:** Setting up of Rural Business Process Outsourcing [BPO] units – Issue of Guidelines and Application Format – reg.

**Read:** G.O. No. ITD 39 MDA 2008, dated: 19.1.2009.

**Preamble:**

In the Government Order read above, Government was pleased to announce incentivisation of Rural BPO units in Taluka / Hobli headquarters having a population of less than one lakh. As per the said Government Order, a Rural BPO unit providings direct employment to not less than 100 persons, shall be eligible for the following financial support from State Government.

**Non-recurring financial support:**

1. Capital investment subsidy upto Rs. 20 lakhs per 100 seater BPO unit,
2. Financial support of Rs. 10,000/- per employee towards manpower training.

**Recurring financial support:**

Financial support of Rs. 5,000/- per employee as subsidy to meet the cost building rentals and Internet connectivity.

It is considered necessary to issue Guidelines for implementation of Rural BPO Project and to format the application for submission of proposals from the entrepreneur for establishment Rural BPO Centre. Hence, the orders.

**Government Order No. ITD 39 MDA 2008, (1), Bangalore, Dated: 4th February 2009**

In continuation of the Government Order read above, Government are pleased to issue the following Guidelines for implementation of the Rural BPO Project.

**Guidelines for Rural BPO Project**

1. Capital Investment Subsidy and financial support will be released in 3 stages as follows:

a) Towards Infrastructure: 50% of Capital Investment Subsidy i.e., Rs.10 lakhs after installation of the equipment / capital goods.

b) Towards Training: 50% on employment
50% on completion of training.

c) Towards Internet connectivity / rentals: 50% on the activation of Internet connectivity

d) Balance amount after commencement of operations and inspection by the Chairman of the Screening Committee

2. Evaluation matrix (marks):

| Sl. No. | Criterion | Marks |
|---|---|---|
| 1 | SC / ST / Physically Handicapped | 5 |
| 2 | Local Enterpreneur | 5 |
| 3 | Located in the Backward / Most Backward Taluks mentioned in Dr.Nanjundappa Report on Regional Imbalanes. | 5 |
| 4 | Technically Qualified (BE/Diploma/MBA/MBBS/BDS) | 5 |
| 5 | Woman Entrepreneur | 5 |
| 6 | Financial Capability / Investment (Max. 5 Marks) | 5 |
| 7 | Technical Evaluation (Max. 5 Marks) | 5 |
| 8 | Employment to local / rural candidates (Max. 10 Marks) | 10 |
| 9 | Proof of business commitment from Companies for the proposed Rural BPO | 5 |
| | **TOTAL** | **50 Marks** |

3. The financial support for training will be released based on the number of persons employed and trained.

4. KBITS will be the Nodal Agency for implementation of the Scheme.

5. The Unit shall become functional with minimum 100 employees within 6 months from the date of G.O. failing which the order will be canelled and financial support recovered or infrastructure forfeited.

Further, the Government are pleased to prescribe the application for Rural BPO Centre as in the Annexure to this Government Order.

By order and in the name of the Governor of Karnataka,

**M.V. KRISHNAMURTHY**

Under Secretary to Government,

Department Information Technology, Biotechnology and Science & Technology

**Annexure to Govt Order No. ITD 39 MDA 2008 [1], Dated: 4[TH] February 2009**

**DEPARTMENT OF I.T., BIOTECHNOLOGY AND SCIENCE & TECHNOLOGY, GOVT. OF KARNATAKA**

**Application For Rural BPO Centre**

| **I] APPLICANT INFORMATION:** | | |
|---|---|---|
| Name: | | |
| Sex : Male / Female | | |
| Category : SC/ST/Physically Handicapped/Others: | | |
| Qualification: | Phone: a) Land No. | b) Mobile: |
| Work Experience (If any) | | |
| Whether a new/ existing firm / company?<br>If existing firm / company, date of establishment :<br>If existing IT firm / Company date of registration with STPI (if registered) :<br>If existing IT firm / Company date of registration with Dept. of IT / BT (if registered) : | | |
| Current office address (if applicable) : | | |
| **II] BUSINESS INFORMATION (IF APPLICABLE):** | | |
| Annual Turnover: | Net Worth: | |
| Head Office address: | No. of Employees | |
| Phone: | E-mail: | Fax: |
| City: | State: | ZIP Code: |
| Industry Type: | Orgn Type: Proprietary/ Partnership/Pvt Co/Trust/ Society | Promoter Name: |
| Nature of IT/BPO services rendered currently: | | |
| Expertise in IT/BPO Vertical: | | |
| Client Details: Current | Past: | |
| Geographies of outsourced work: | | |
| Current proceesing capacity/No of seats: | | |
| Service & Technical support Infrastructure details: | | |
| Has your Company been blacklisted by any Govt Agency : Yes | | No |
| **III] INFORMATION TO BE ATTACHED (FOR EXISTING FIRMS / COMPANIES):** | | |
| Audited Balance Sheet & IT Returns of past 3 Years: | | |
| Certificate of Incorporation: | Phone: | |
| Business Certification (if any) from competent authorities: | | |
| Prior history of any projects for State Govt: | | |
| Govt Vendor empanelment details (if any): | | |

<table>
<tr><td colspan="6">IV] DETAILS OF PROPOSED RURAL BPO :</td></tr>
<tr><td colspan="6">a) Proposed location of Rural BPO with postal address :</td></tr>
<tr><td colspan="6">b) Whether BPO being set up in own / leased / rental premises:</td></tr>
<tr><td colspan="6">i) If own, copies of relevant property documents enclosed: Yes/ No</td></tr>
<tr><td colspan="6">ii) Iflease / rent, copies of relevant agreement enclosed: Yes/ No</td></tr>
<tr><td colspan="6">c) No. of persons to be employed in the proposed Rural BPO:</td></tr>
<tr><td colspan="6">d) Whether any business commitments received from companies for the proposed Rural BPO (If Yes, Please enclose copies of the commitment letter received) :</td></tr>
<tr><td colspan="6">e) Details of Infrastructure proposed to be created:<br>i) No. of computers:<br>ii) UPS :<br>III) DG Set :<br>IV) Internet Connectivity :<br>V) Power Supply :</td></tr>
<tr><td colspan="6">f) Means of finance for setting up of the rural BPO :</td></tr>
<tr><td colspan="6">REFERENCES:</td></tr>
<tr><td colspan="2">Name</td><td colspan="2">Address</td><td colspan="2">Phone</td></tr>
<tr><td colspan="2">1.</td><td colspan="2"></td><td colspan="2"></td></tr>
<tr><td colspan="2">2.</td><td colspan="2"></td><td colspan="2"></td></tr>
<tr><td colspan="6">V] SIGNATURE:</td></tr>
<tr><td colspan="6">I/We hereby declare that the details mentioned above are true and correct to the best of my/our knowledge, information and belief. In case any of the Information furnished is found to be false or incorrect, appropriate legal action may be initiated against me/us.</td></tr>
<tr><td colspan="3">Signature of Applicant:</td><td colspan="3">Date:</td></tr>
<tr><td colspan="3">Signature of Director/Partner:</td><td colspan="3">Date:</td></tr>
</table>

P.R. 518

**INFRASTRUCTURE DEVELOPMENT SECRETARIAT**

**Sub:** Release of funds for construction of RUB in lieu of L.C.No.31 between Gadag-Hulakoti Stations (Deposit works)

**Read:** 1. G.O. No. IDD 121 NSW 06 dated 16.6.2008.

2. Letter No.RUB/GDG/154/Est dated 18.12.2008 from the Deputy ChiefEngineer, Construction, SWR, Hubli.

**Preamble:**

In the Government Order read at (1) above, Government of Karnataka has released an amount of Rs. 1.14 crore towards construction of RuB in lieu of L.C.No. 31 between Gadag-Hulakoti Stations as this work falls under deposit work since TVU count is less than one lakh.

2. The Deputy Chief Engineer, Construction, SWR, Hubli, in his letter read at (2) above, has stated that as per the detailed estimate the total cost works out to Rs.4.90 crores and has requested to release the balance amount of Rs.3.76 crores out of total cost of Rs.4.90 crores towards construction of RuB in lieu of L.C.No. 31 between Gadag-Hulakoti. The matter has been examine and ordered as under.

**Government Order No. IDD 65 NSW 2008, Bangalore, Dated: 31st January 2009.**

After careful examination of the request of railway, Government is pleased to release an amount of Rs.2.76 crores (Two Crores Seventy Six Lakhs Only) towards construction of RuB in lieu of L.C.No.31 between Gadag-Hulakoti Stations for deposit contribution work.

1. This amount shall be met out under the Head of Account 5465-01-190-3-04 (P)-211 K-RIDE RoB/RuB investments.

2. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government. IDD and CEO K-RIDE shall in turn deposit the same with the Financial Advisor and Chief Accounts Officer (Construction), SWR, Bangalore.

3. This order is issued in exercise of the Financial Powers delegated vide G.O.No. FD 1 TFP 2008 dated 16.5.08 to Secretaries/ Principal Secretaries of Administrative Department.

By Order and in the name of Governor of Karnataka,

**N. MANJULA GEETHA**

P.R. 522

Under Secretary to Government,

Infrastructure Development Department.

**COMMERCE AND INDUSTRIES SECRETARIAT**

**Sub:** Project proposal of M/s TATA Metaliks Pvt Ltd., to establish "Iron and Steel Plant – 0.7 MTPA" at Devagiri – Yellapura Villages, Haveri Taluk and District Change location from Ganajur Village) – Approval for-Orders reg.

**Read:**
1. Proceedings of the 14th State High Level Clearance Committee [SHLCC] meeting held on 17.03.2008.
2. G.O. No. CI 87 SPI 2008 dated 05.05.2008.
3. Proceedings of the 16th State High Level Clearance Committee [SHLCC] meeting held on 19.11.2008.

**Preamble:**

The proposal of M/s TATA Metaliks Pvt. Ltd., Kolkata, West Bengal to establish a "Iron and Steel Plant – 0.7 MTPA" with an investment of Rs.984.00 Crores in 700 acres of land at various Sy.Nos. at Ganajur Village, Haveri Taluk and District was approved in the 14th State High Level Clearance Committee meeting held on 17.03.2008. Accordingly, Govt. Order read at (2) above was issued.

Now the Company has requested to approve the change of location from the earlier approved above site to the different Sy. Nos. of Devagiri and Devagiri Yellapura VIllages of Haveri Taluk comprising of 900 acres, due to locational disadvantage from environmental angle.

In the proposal submitted before the 16th State High Level Clearance Committee meeting [SHLCC] held on 19.11.2008, the State High Level Clearance Committee, after detailed discussion of the project proposal of the said Company, vide the proceedings read above (3), has recommended for approval of the project for change of location.

Government has examined the recommendations made by the State High Level Clearance Committee in its 16th Meeting held on 19.11.2008 in all aspects. Hence the following order.

**Government Order No: CI 9 SPI 2009, Bangalore, Dated: 10th February 2009**

In the circumstaces explained above, Government is pleased to accord approval to M/s TATA Metaliks Ltd., Kolkata, West Bengal to change the location of the projet to establish "Iron and Steel Plant – 0.7 MTPA" from Ganajur Village to Devagiri and Devagiri – Yellapur village, Haveri Taluk and District.

KIADB to acquire the land on consent basis from he law full land owners and as SUC. The Company shall furnish the consent for minimum 70% of total extent of land proposed for the project to KIADB before KIADB initiates acquisition.

**ENVIRONMENT:**

KSPCB to issue CFE as per their norms. The company shall obtain environmental clearance from State. No works shall commence prior to obtaining ECC.

**EMPLOYMENT:**

Project proponents shall play a proactive role in enhancing the employability of the local job seekers, including the land losers. Further, the Company shall prepare a plan for development of human resources required for the project, train local people and provide employment to these trained local youth and comply with Government policy of Employment to local people i,e. Dr. Sarojini Mahishi report. A copy of human resources development plan shall be sent to the Commissioner for I.D. & Director of Industries and Commerce for monitoring.

**VENDOR DEVELOPMENT:**

Where ever there is scope for vendor development for the project, the company shall prepare a vendor development plan develop local vendors and procure the required inputs, components and sub assemblies from these local vendor units. A copy of the vendor development plan shall be sent to th Commissioner for I.D. & Director of Industries and Commerce for monitoring.

**SOCIAL INFRASTRUCTURE DEVELOPMENT:**

The Copmpany is advised to take up social infrastructure development projects in the vicinity of proposed location of the unit as per R&R policy 2007 (GoI). A copy of such projects shall be sent to the Government.

**OTHERS:**

The promoter shall take all statutory and other necessary clearances and shall submit milestones / progress in implementation of the project regularly, which will be monitored by the Departments concerned.

This approval is valid for a period of two years from the date of issue.

By Order and in the name of the Governor of Karnataka,

**APARNA PAVATE**

P.R. 725 Desk Officer (Technical Cell), Commerce & Industries Department.

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ಶ್ರೀ ಹೆಚ್. ಪುಟ್ಟಸ್ವಾಮಿ, ಅಫಿಷಿಯಲ್ ರಿಸೀವರ್, ಬೆಂಗಳೂರು ಇವರನ್ನು ಒ.ಎಸ್.ನಂ.809(80) ಪ್ರಕರಣದಲ್ಲಿ ಹಿಂಪಡೆಯುವ ಬಗ್ಗೆ.

**ಓದಲಾಗಿದೆ:**

1. ಅಧಿಸೂಚನೆ ಸಂಖ್ಯೆ ಲಾ 112 ಎಲ್‌ಸಿಎಲ್ 2000 ದಿನಾಂಕ: 20.08.2001.
2. ತಿದ್ದೋಲೆ ಸಂಖ್ಯೆ ಲಾ 112 ಎಲ್‌ಸಿಎಲ್ 2000 ದಿನಾಂಕ: 04.09.2001.
3. ಅಧಿಸೂಚನೆ ಸಂಖ್ಯೆ ಲಾ 170 ಎಲ್‌ಸಿಎಲ್ 2007 ದಿನಾಂಕ: 13.02.2007.
4. ಶ್ರೀ ಎ. ರಾಮಚಂದ್ರ ರೆಡ್ಡಿ, ಡಿಫೆಂಡೆಂಟ್ ನಂ.8 ಒ.ಎಸ್.809/1980, ಬೆಂಗಳೂರು ಇವರ ಮನವಿ ದಿನಾಂಕ 28.09.2007, 16.06.2008 ಹಾಗೂ 15.12.2008.

**ಪ್ರಸ್ತಾವನೆ:**

ಬೆಂಗಳೂರು ಜಿಲ್ಲೆ ಅಫಿಷಿಯಲ್ ರಿಸೀವರ್ ಆಗಿ ನೇಮಕಹೊಂದಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಹೆಚ್. ಪುಟ್ಟಸ್ವಾಮಿ ಅವರ ಕಾರ್ಯವಧಿಯು ಮುಕ್ತಾಯಗೊಂಡಿದ್ದರಿಂದ, ಮೇಲೆ (1)ರಲ್ಲಿ ಓದಲಾದ ದಿನಾಂಕ: 20.08.2001ರ ಅಧಿಸೂಚನೆಯಲ್ಲಿ ಶ್ರೀ ಎಂ. ರಾಮಚಂದ್ರ ರೆಡ್ಡಿ, ವಕೀಲರು ಇವರನ್ನು ಬೆಂಗಳೂರು ನಗರ ಅಫಿಷಿಯಲ್ ರಿಸೀವರ್ ಆಗಿ ನೇಮಿಸಲಾಗಿತ್ತು. ಅದರಂತೆ, ಅವರು ದಿನಾಂಕ: 29.08.2001ರಂದು ಕಾರ್ಯಭಾರವಹಿಸಿಕೊಂಡಿದ್ದು, ಪ್ರಕರಣ I.C.7/93, I.C.6/93 ಹಾಗೂ ಹಾಗೂ ಒ.ಎಸ್. 809/80 ಅಂತಿಮ ಹಂತದಲ್ಲಿದ್ದು, ವರದಿ ಸಲ್ಲಿಸುವವರೆಗೂ ಅವಕಾಶ ಕಲ್ಪಿಸಿಕೊಡುವಂತೆ ದಿನಾಂಕ: 20.08.2001ರ ಮನವಿಯಲ್ಲಿನ ಶ್ರೀ ಪುಟ್ಟಸ್ವಾಮಿಯವರ ಕೋರಿಕೆಯನ್ನು ಪರಿಗಣಿಸಿ I.C.7/93, I.C.6/93 ಹಾಗೂ ಒ.ಎಸ್. ಸಂಖ್ಯೆ 809:80ಕ್ಕೆ ಸಂಬಂಧಿಸಿದಂತೆ, ಸದರಿ ಪ್ರಕರಣಗಳಲ್ಲಿ ನಡೆವಳಿಗಳು ಮುಕ್ತಾಯಗೊಂಡು ಸಕ್ಷಮ ನ್ಯಾಯಾಲಯಕ್ಕೆ ವರದಿ ಸಲ್ಲಿಸುವವರೆಗೆ ಮಾತ್ರ ಮುಂದುವರಿಸಲು ಮೇಲೆ (2)ರಲ್ಲಿ ಓದಲಾದ ತಿದ್ದೋಲೆಯಲ್ಲಿ ಶ್ರೀ ಹೆಚ್. ಪುಟ್ಟಸ್ವಾಮಿಯವರನ್ನು ಮುಂದುವರೆಸಲಾಗಿತ್ತು.

ಈ ಮಧ್ಯೆ, ಒ.ಎಸ್.ಸಂಖ್ಯೆ 809:80ರಲ್ಲಿ ಡಿಫೆಂಡೆಂಟ್ ನಂ.8 ಆಗಿರುವ ಶ್ರೀ ಎ. ರಾಮಚಂದ್ರ ರೆಡ್ಡಿರವರು ಮೇಲೆ (4)ರಲ್ಲಿ ಓದಲಾದ ಮನವಿಗಳಲ್ಲಿ ಶ್ರೀ ಹೆಚ್. ಪುಟ್ಟಸ್ವಾಮಿಯವರು ಸದರಿ ಪ್ರಕರಣವನ್ನು ಇನ್ನು ಮುಕ್ತಾಯಗೊಳಿಸದೆ

ಇರುವುದರಿಂದ, ಮೇಲೆ (2)ರಲ್ಲಿ ಓದಲಾದ ದಿನಾಂಕ: 04.09.2001ರ ತಿದ್ದೋಲೆಯನ್ನು ಹಿಂದಕ್ಕೆ ಪಡೆಯಲು ಕೋರಿರುತ್ತಾರೆ. ಶ್ರೀ ಹೆಚ್. ಪುಟ್ಟಸ್ವಾಮಿಯವರಿಗೆ ಸಾಕಷ್ಟು ಕಾಲಾವಕಾಶ ನೀಡಿದ್ದು ಸದರಿ ಪ್ರಕರಣವು ಮುಕ್ತಾಯಗೊಂಡಿರುವುದಿಲ್ಲವಾದ್ದರಿಂದ ಮತ್ತು ಮೇಲೆ (3)ರಲ್ಲಿ ಓದಲಾದ ದಿನಾಂಕ: 16.10.2008ರ ಅಧಿಸೂಚನೆಯಲ್ಲಿ ಶ್ರೀ ಬಿ. ಪ್ರಸನ್ನ, ಇವರು ಬೆಂಗಳೂರು ನಗರ ಅಫಿಷಿಯಲ್ ರಿಸೀವರ್ ಆಗಿ ನೇಮಕ ಹೊಂದಿದ್ದು 'ಜಿಲ್ಲೆಗೆ ಒಬ್ಬರೇ ಅಫಿಷಿಯಲ್ ರಿಸೀವರ್ ಇರುವುದು' ಸೂಕ್ತವೆಂದು ಸರ್ಕಾರ ತೀರ್ಮಾನಿಸಿದೆ.

ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂ. ಲಾ 207 ಎಲ್‌ಸಿಎಲ್ 2007, ಬೆಂಗಳೂರು, ದಿನಾಂಕ: 5ನೇ ಮಾರ್ಚ್ 2009**

ಪ್ರಸ್ತಾವನೆಯ ಅಂಶಗಳನ್ನು ಪರಿಗಣಿಸಿ ಶ್ರೀ ಹೆಚ್. ಪುಟ್ಟಸ್ವಾಮಿ, ಇವರನ್ನು ಪ್ರಕರಣ ಸಂಖ್ಯೆ. I.C.793, I.C.6/93 ಹಾಗೂ ಓ.ಎಸ್. ನಂ.809:80ಕ್ಕೆ ಸಂಬಂಧಿಸಿದಂತೆ ಅಫಿಷಿಯಲ್ ರಿಸೀವರ್ ಆಗಿ ಮುಂದುವರಿಸಲಾಗಿದ್ದ, ತಿದ್ದೋಲೆ ಸಂಖ್ಯೆ ಲಾ 112 ಎಸ್‌ಸಿಎಲ್ 2000 ದಿನಾಂಕ: 04.09.2001ನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ಶಕುಂತಲ**

ಪಿ.ಆರ್. 817

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## INFRASTRUCTURE DEVELOPMENT SECRETARIAT

**Sub:** Release of funds towards cost sharing Projects Ramanagaram-Mysore Doubling Railway Project.

**Read:**
1. G.O. No. IDD 68 NSW 2003 dated 24.07.2007.
2. Letter No.W.63/B/CN/BNC.Genl dated 20.01.09 of CE (Con.,) SWR, Bangalore.

**Preamble:**

In the Government Order referred at Sl. No.(1) above, an amount of Rs.16.15 crore was released towards cost sharing for Ramanagaram – Mysore Doubling railway line project.

2. The Chief Administrative Officer, South Western Railway, in his letter read at Sl.No.(2) above, has requested to arrange to deposit GoK's share amount of Rs. 10.00 Crores towards cost sharing of doubling between Ramanagaram-Mysore Section.

3. Government of Karnataka after examining the request of railway has decided to release an amount of Rs.10.00 (Ten Crores only) towards doubling of railway track between Ramanagaram-Mysore stretch during 2008-09. Hence this order.

**Government Order No. IDD 101 NSW 2007, Bangalore, Dated: 4th March 2009**

After careful examination of the request of railways, Government is pleased to release an amount of Rs.10.00 crores (Ten crores) being the part of the 2/3 share of GoK under the head of account 5465-01-190-3-08 (P)- other expenditure towards doubling of Railway track between Ramanagaram-Mysore stretch.

2. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railway, Bangalore.

3. This order is issued in accordance with the concurrence of Finance Department given vide U.O.Note No.FD 251 Exp-I / 09 dated 02.03.2009.

By Order and in the name of Governor of Karnataka,

**N. MANJULA GEETHA**

P.R. 819

Under Secretary to Government,

Infrastructure Development Department.

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ರಾಘವೇಂದ್ರ ಆಶ್ರಮ ಪ್ರೌಢಶಾಲೆ, ದೊಡ್ಡಬೊಮ್ಮಸಂದ್ರ, ವಿದ್ಯಾರಣ್ಯಪುರ ಅಂಚೆ ಬೆಂಗಳೂರು ಇದರ ಶಿಕ್ಷಕರ ವೇತನ ಬಾಕಿ ಪಾವತಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ: 04.10.2007, ಸಂಖ್ಯೆ: ಇಡಿ 45 ಎಸ್‌ಇಎಸ್ 2004ರ ಸರ್ಕಾರಿ ಆದೇಶ.
2. ದಿನಾಂಕ: 29.12.2007, ಸಂಖ್ಯೆ: ಅನು:6:ಶಿಪೋ.ಸಂಘಅ01:2003–2004ರ ಉಪ ನಿರ್ದೇಶಕರು, ಸಾರ್ವಜನಕ ಶಿಕ್ಷಣ ಇಲಾಖೆ, ಬೆಂಗಳೂರು ಉತ್ತರ ಜಿಲ್ಲೆ, ಬೆಂಗಳೂರುರವರ ಪತ್ರ.
3. ದಿನಾಂಕ:15.12.2008, ಸಂಖ್ಯೆ:ಅಭಿವೃದ್ಧಿ(3)ಶಿಕ್ಷಣ/78/2008–09ರ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಬೆಂಗಳೂರು ನಗರ ಜಿಲ್ಲಾ ಪಂಚಾಯತಿ, ಬೆಂಗಳೂರುರವರ ಪತ್ರ.
4. ದಿನಾಂಕ: 01.01.2009, ಸಂಖ್ಯೆ : ಲೆಕ್ಕ.2 ಹೆ.ವೇ.ಬೇ.ಬಗ್ಗೆ.01/2008–09ರ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಉತ್ತರ ಜಿಲ್ಲೆ, ಬೆಂಗಳೂರುರವರ ಪತ್ರ.

**ಪ್ರಸ್ತಾವನೆ:**

1) ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ಶ್ರೀ ರಾಘವೇಂದ್ರ ಶಿಕ್ಷಕ–ಪೋಷಕರ ಸಂಘ, ದೊಡ್ಡಬೊಮ್ಮಸಂದ್ರ, ವಿದ್ಯಾರಣ್ಯಪುರ ಅಂಚೆ, ಬೆಂಗಳೂರು ಇದರ ಆಶ್ರಯದಲ್ಲಿ/ವತಿಯಿಂದ ನಡೆಸುತ್ತಿರುವ ಶ್ರೀ ರಾಘವೇಂದ್ರ ಆಶ್ರಮ ಪ್ರೌಢಶಾಲೆ, ದೊಡ್ಡಬೊಮ್ಮಸಂದ್ರ, ವಿದ್ಯಾರಣ್ಯಪುರ ಅಂಚೆ, ಬೆಂಗಳೂರು ಇದರ 04 (ನಾಲ್ಕು) ಶಿಕ್ಷಕರುಗಳಿಗೆ ಕೆಲವು ಷರತ್ತುಗಳಿಗೆ ಒಳಪಡಿಸಿ, ಸಂಖ್ಯೆ : ಇಡಿ 45 ಎಸ್‌ಇಎಸ್ 2004ರ ಕಡತದ ಖಂಡಿಕೆ–80ರಲ್ಲಿ ಆರ್ಥಿಕ ಇಲಾಖೆಯ ಅನುದಾನ ಬಿಡುಗಡೆಗೆ ಸಹಮತಿಸಿರುವ ಹಿನ್ನೆಲೆಯಲ್ಲಿ ಸಹಾಯಾನುದಾನವನ್ನು ಮುಂದುವರೆಸಿ ಬಿಡುಗಡೆ ಮಾಡಲು ಅನುಮತಿ ನೀಡಲಾಗಿದೆ.

2) ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಉತ್ತರ ಜಿಲ್ಲೆ, ಬೆಂಗಳೂರುರವರು ಮೇಲ್ಕಂಡ ಪ್ರೌಢಶಾಲೆಯ ಈ ಕೆಳಕಂಡ 04 (ನಾಲ್ಕು) ಶಿಕ್ಷಕರುಗಳಿಗೆ ಕೆಲವು ಷರತ್ತುಗೊಳಪಡಿಸಿ 2003–2004ನೇ ಶೈಕ್ಷಣಿಕ ವರ್ಷದಿಂದ ವೇತನ ಬಿಡುಗಡೆ ಮಾಡಲು ಅನುಮತಿ ನೀಡಿರುತ್ತಾರೆ.

| ಕ್ರಮ ಸಂಖ್ಯೆ | ಶಿಕ್ಷಕರ ಹೆಸರು | ಹುದ್ದೆ |
|---|---|---|
| 1 | ಶ್ರೀ ಜಿ.ಪಿ. ಭಟ್ | ಸಹ ಶಿಕ್ಷಕರು |
| 2 | ಶ್ರೀಮತಿ ಕೆ.ಎಸ್. ಗಾಯಿತ್ರಿ | ಸಹ ಶಿಕ್ಷಕಿ |
| 3 | ಶ್ರೀ ಪಿ.ವೈ. ಸುಂದರೇಶ್ | ದೈಹಿಕ ಶಿಕ್ಷಣ ಶಿಕ್ಷಕರು |
| 4 | ಶ್ರೀ ಬಿ.ಪಿ. ಶಶಿಧರ್ | ಚಿತ್ರಕಲಾ ಶಿಕ್ಷಕರು |

3) ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಬೆಂಗಳೂರು ನಗರ ಜಿಲ್ಲಾ ಪಂಚಾಯಿತಿ, ಬೆಂಗಳೂರು ರವರು ಶ್ರೀ ರಾಘವೇಂದ್ರ ಆಶ್ರಮ ಪ್ರೌಢಶಾಲೆ, ದೊಡ್ಡಬೊಮ್ಮಸಂದ್ರ, ವಿದ್ಯಾರಣ್ಯಪುರ ಅಂಚೆ, ಬೆಂಗಳೂರು ಇದರ 04 (ನಾಲ್ಕು) ಶಿಕ್ಷಕರ ಬಾಕಿ ವೇತನಕ್ಕಾಗಿ 2003–04ನೇ ಶೈಕ್ಷಣಿಕ ವರ್ಷದಿಂದ 25–00 ಲಕ್ಷ ರೂ. (ಇಪತ್ತೈದು ಲಕ್ಷ ರೂಪಾಯಿಗಳು ಮಾತ್ರ)ಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಶಿಕ್ಷಕರು ಕೋರಿದ್ದು, ಆಯವ್ಯಯದಲ್ಲಿ ಅನುದಾನವನ್ನು ತೊಡಗಿಸಿಕೊಂಡಿರುವುದಿಲ್ಲವೆಂದು ತಿಳಿಸುತ್ತಾ, ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿತ್ತಾರಾದ್ದರಿಂದ, ಸರ್ಕಾರ ನಿಗದಿಪಡಿಸಿದ ಅನುದಾನಕ್ಕಿಂತ ಹೆಚ್ಚುವರಿ ಅನುದಾನ ಬಿಡುಗಡೆ ಮಾಡಲು ಸಾಧ್ಯವಿರುವುದಿಲ್ಲವಾದ್ದರಿಂದ, ಈ ಬಗ್ಗೆ ಸರ್ಕಾರದಿಂದ ಅನುಮತಿ ಪಡೆಯುವಂತೆ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಉತ್ತರ ಜಿಲ್ಲೆ, ಬೆಂಗಳೂರು ರವರಿಗೆ ತಿಳಿಸಿರುತ್ತಾರೆ.

4) ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಉತ್ತರ ಜಿಲ್ಲೆ, ಬೆಂಗಳೂರುರವರು ಶ್ರೀ ರಾಘವೇಂದ್ರ ಆಶ್ರಮ ಪ್ರೌಢಶಾಲೆ, ದೊಡ್ಡಬೊಮ್ಮಸಂದ್ರ ವಿದ್ಯಾರಣ್ಯಪುರ ಅಂಚೆ, ಬೆಂಗಳೂರು ಇದರ 04 (ನಾಲ್ಕು) ಶಿಕ್ಷಕರುಗಳಿಗೆ 2003 ಜೂನ್ ತಿಂಗಳಿನಿಂದ 2007ರ ಡಿಸೆಂಬರ್ ತಿಂಗಳವರೆಗೆ ವೇತನದ ಬಾಕಿಯಾಗಿ ಪಾವತಿಸಬೇಕಾಗಿರುವ 25.00 ಲಕ್ಷ ರೂ.(ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ)ಗಳ ಅನುದಾನಕ್ಕೆ ಸರ್ಕಾರದಿಂದ ಅನುಮತಿ ಪಡೆದು ಭರಿಸುವಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಬೆಂಗಳೂರು ನಗರ ಜಿಲ್ಲಾ ಪಂಚಾಯತಿ, ಬೆಂಗಳೂರು ರವರು ತಿಳಿಸಿರುವ ಹಿನ್ನೆಲೆಯಲ್ಲಿ 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ "2202–02–110–3–51" (ಯೋಜನೇತರ) ಅಡಿ ಒದಗಿಸಲಾಗಿರುವ ಒಟ್ಟಾರೆ 7386–70 ಲಕ್ಷ ರೂ.ಗಳಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಬೆಂಗಳೂರು ಉತ್ತರ ಜಿಲ್ಲೆಗೆ 3385–93 ಲಕ್ಷ ರೂ.ಗಳು ನಿಗದಿಯಾಗಿದ್ದು, ಇದುವರೆಗೂ 2425–00 ಲಕ್ಷ (ಎರಡು ಸಾವಿರದ ನಾಲ್ಕು ನೂರ ಇಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ರೂ.ಗಳ ಅನುದಾನ ಬಿಡುಗಡೆ ಮಾಡಿದ್ದು, ನವೆಂಬರ್ ಅಂತ್ಯದವರೆಗೆ 1972–30 ಲಕ್ಷ ರೂ.ಗಳು

ಅನುದಾನ ವೆಚ್ಚವಾಗಿದೆ. ಉಳಿಕೆ ಅನುದಾನ 1413–63 ಲಕ್ಷ ರೂ.ಗಳಲ್ಲಿ 2008ರ ಡಿಸೆಂಬರ್, 2009ರ ಜನವರಿ, ಫೆಬ್ರವರಿ ಮಾಹೆಗಳ ವೇತನಾಂಶ ಮತ್ತು ಪರಿಷ್ಕೃತ ವೇತನ ಬಾಕಿ ಪಾವತಿಸಿ ಉಳಿಕೆಯಾಗುವ ಅನುದಾನದಲ್ಲಿ 25–00 ಲಕ್ಷ ರೂ. (ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ)ಗಳ ಅನುದಾನವನ್ನು ಸದರಿ ಶಾಲೆಯ ಶಿಕ್ಷಕರ ವೇತನ ಬಾಕಿ ಪಾವತಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

5) ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 21 ಯೋಯೋಕ 2009, ಬೆಂಗಳೂರು, ದಿನಾಂಕ: 11ನೇ ಫೆಬ್ರವರಿ 2009**

**[ಇಡಿ 17 ಸ್ವೀಮರ (ಯುನಿಕ್) 2009 ದಿನಾಂಕ: 11ನೇ ಫೆಬ್ರವರಿ 2009]**

6) ಶ್ರೀ ರಾಘವೇಂದ್ರ ಶಿಕ್ಷಕ–ಪೋಷಕರ ಸಂಘ, ದೊಡ್ಡಬೊಮ್ಮಸಂದ್ರ, ವಿದ್ಯಾರಣ್ಯಪುರ ಅಂಚೆ, ಬೆಂಗಳೂರು ಇದರ ಆಶ್ರಯದಲ್ಲಿ/ವತಿಯಿಂದ ನಡೆಸುತ್ತಿರುವ ಶ್ರೀ ರಾಘವೇಂದ್ರ ಆಶ್ರಮ ಪ್ರೌಢಶಾಲೆ, ದೊಡ್ಡಬೊಮ್ಮಸಂದ್ರ, ವಿದ್ಯಾರಣ್ಯಪುರ ಅಂಚೆ, ಬೆಂಗಳೂರು ಇದರ 04 (ನಾಲ್ಕು) ಶಿಕ್ಷಕರುಗಳಿಗೆ 2003ರ ಜೂನ್ ತಿಂಗಳಿನಿಂದ 2007ರ ಡಿಸೆಂಬರ್ ತಿಂಗಳವರೆಗಿನ ವೇತನ ಬಾಕಿ 25–00 ಲಕ್ಷ ರೂ. (ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ)ಗಳನ್ನು ಪಾವತಿಸಲು 2008–09ನೇ ಸಾಲಿಗೆ ಬೆಂಗಳೂರು ನಗರ ಜಿಲ್ಲೆಗೆ ಲೆಕ್ಕ ಶೀರ್ಷಿಕೆ "2202–02–110–3–51" (ಯೋಜನೇತರ)ರಡಿ ಒದಗಿಸಲಾಗಿರುವ ಒಟ್ಟಾರೆ 7386–70 ಲಕ್ಷ ರೂ. (ಎಪ್ಪತ್ಮೂರು ಕೋಟಿ ಎಂಬತ್ತಾರು ಲಕ್ಷದ ಎಪ್ಪತ್ತು ಸಾವಿರ ರೂಪಾಯಿಗಳು ಮಾತ್ರ)ಗಳಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ, ಬೆಂಗಳೂರು ಉತ್ತರ ಜಿಲ್ಲೆಗೆ ನಿಗದಿಯಾಗಿರುವ 3385–93 ಲಕ್ಷ ರೂ. (ಮೂವತ್ಮೂರು ಕೋಟಿ ಎಂಬತ್ತೈದು ಲಕ್ಷದ ತೊಂಬತ್ಮೂರು ಸಾವಿರ ರೂಪಾಯಿಗಳು ಮಾತ್ರ)ಗಳ ಮಿತಿಯಲ್ಲಿಯೇ ಉಳಿತಾಯವಾಗಲಿರುವ ಅನುದಾನದಲ್ಲಿ ಭರಿಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಬೆಂಗಳೂರು ನಗರ ಜಿಲ್ಲಾ ಪಂಚಾಯಿತಿ, ಬೆಂಗಳೂರುರವರಿಗೆ ಕೆಳಕಂಡ ಷರತ್ತಿಗೊಳಪಡಿಸಿ ಅನುಮತಿ ನೀಡಲಾಗಿದೆ.

**ಷರತ್ತುಗಳು:**

1) ಅನುಮೋದಿತ ಶಿಕ್ಷಕರುಗಳಿಗೆ ಅವರುಗಳ ಅನುಮೋದನೆಯಾದ ದಿನಾಂಕದಿಂದ ಅವರುಗಳು ಕಾರ್ಯನಿರ್ವಹಿಸಿದ ಅವಧಿಗೆ ಮಾತ್ರ ವೇತನ ಪಾವತಿ ಮಾಡತಕ್ಕದ್ದು.
2) ಯಾವುದೇ ಕಾರಣಕ್ಕೂ ಎರಡು ಬಾಕಿ (ಡಬಲ್ ಪೇಮೆಂಟ್) ವೇತನ ನೀಡಿದಂತಾಗಬಾರದು.
3) ಬಿಡುಗಡೆ ಮಾಡಿರುವ ಅನುದಾನವನ್ನು ವೇತನ ಬಾಕಿ ಪಾವತಿ ಮಾಡುವ ಉದ್ದೇಶಕ್ಕಾಗಿಯೇ ಬಳಸತಕ್ಕದ್ದು.
4) ಅನುದಾನವನ್ನು ಪಾವತಿ ಮಾಡುವ ಮೊದಲು ಪೂರ್ಣವಾಗಿ ಸೇವಾ ವಿವರಗಳನ್ನು ಪರಿಶೀಲಿಸತಕ್ಕದ್ದು.

7) ಈ ಆದೇಶವನ್ನು ದಿನಾಂಕ: 30.01.2009, ಸಂಖ್ಯೆ : ಇಡಿ 212 ಐಎಫ್ (ಬಿಎ) 2009ರ ಅನಧಿಕೃತ ಟಿಪ್ಪಣಿಯಲ್ಲಿ ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ಪಿ.ಆರ್. 820

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ).

**ವಿಷಯ:** ಸಾರ್ವಜನಿಕ ಗ್ರಂಥಾಲಯ ಇಲಾಖೆಯ ಲೆಕ್ಕ ಶೀರ್ಷಿಕೆ 2205–00–105–0–01–059 ಅಡಿ ನಿಗದಿಯಾದ ಕಾರ್ಯಕ್ರಮಗಳ ಬದಲಾವಣೆ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಾಗ್ರಂಇ: ಯೋಜನೆ/ಆ.ವ್ಯ./7438/2008–09, ದಿನಾಂಕ: 03.02.2009.

**ಪ್ರಸ್ತಾವನೆ:**

1) ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರು 2008–09ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2205–00–105–0–01–059 ಅಡಿ ನಿಗದಿಯಾದ ಕಾರ್ಯಕ್ರಮಗಳಲ್ಲಿ ಈ ಕೆಳಕಂಡ ಕಾರ್ಯಕ್ರಮಗಳಿಗೆ ಒದಗಿಸಿದ ಅನುದಾನವನ್ನು ಬಳಸಿಕೊಳ್ಳಲು ಸಾಧ್ಯವಾಗಿರುವುದಿಲ್ಲ ಎಂದು ಮಾಹಿತಿ ನೀಡಿರುತ್ತಾರೆ.

ರೂ. ಲಕ್ಷಗಳಲ್ಲಿ

| | | |
|---|---|---|
| 1. | ಹೊಸ ಘಟಕದ ಕಾರ್ಯಕ್ರಮಗಳಿಗೆ ಯೋಜಿಸಿದ ಕಾರ್ಯಕ್ರಮಗಳು ಸರ್ಕಾರದಿಂದ ಒಪ್ಪಿತವಾಗದಿರುವುದು. | 82.98 |
| 2. | ಯೋಜನೆ ಅಡಿ ಮಂಜೂರಾದ 50 ಗ್ರಂಥಾಲಯ ಸಹಾಯಕರ 4 ತಿಂಗಳ ವೇತನ– ಕೆ.ಪಿ.ಎಸ್.ಸಿ. ಯಿಂದ ನೇಮಕಾತಿ ಪ್ರಕ್ರಿಯೆ ವಿಳಂಬವಾಗಿರುವುದು. | 18.50 |

| | | |
|---|---|---|
| 3. | ಗ್ರಂಥಾಲಯಗಳ ನಿರ್ವಹಣೆಗಾಗಿ– ಇನ್ನೂ ಬಳಕೆಯಾಗದಿರುವುದು. | 16.00 |
| 4. | 7 ಹೊಸ ಗ್ರಂಥಾಲಯ ಪ್ರಾಧಿಕಾರಿಗಳಿಗೆ ನಿಗದಿಯಾದ ಸಿಬ್ಬಂದಿಯವರಿಗೆ 4 ತಿಂಗಳ ವೆಚ್ಚ – ವೇತನ ಯೋಜನೇತರ ಅಡಿಯಲ್ಲಿ ಪಾವತಿಯಾಗುವುದರಿಂದ ಉಳಿತಾಯವಾಗಿದೆ. | 2.70 |
| 5. | ಚಿಕ್ಕಬಳ್ಳಾಪುರ ಮತ್ತು ರಾಮನಗರ ಜಿಲ್ಲೆಗೆ ಮಂಜೂರಾದ ಮುಖ್ಯ ಗ್ರಂಥಾಲಯಾಧಿಕಾರಿಗಳು ಹಾಗೂ ಇತರ ಸಿಬ್ಬಂದಿ ವೇತನ – ಯೋಜನೇತರ ಅಡಿಯಲ್ಲಿ ಪಾವತಿಯಾಗುವುದರಿಂದ ಉಳಿತಾಯವಾಗಿದೆ. | 13.82 |
| | **ಒಟ್ಟು** | **134.00** |

2) ಹಾಗೂ ಬಳಕೆಯಾಗದೇ ಉಳಿದಿರುವ ಮೊತ್ತವನ್ನು ಈ ಕೆಳಗಿನ ಬಾಬ್ತುಗಳಿಗೆ ಬಳಕೆ ಮಾಡಲು ಮರು ಕಾರ್ಯಕ್ರಮಗಳನ್ನು, ಅದಕ್ಕೆ ತಗಲುವ ವೆಚ್ಚವನ್ನು ನಿಗದಿಗೊಳಿಸಿ ಸರ್ಕಾರದ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ರೂ. ಲಕ್ಷಗಳಲ್ಲಿ

| | | |
|---|---|---|
| 1. | 10 ಅಲೆಮಾರಿ ನೆಲೆಗಳಲ್ಲಿ ಗ್ರಂಥಾಲಯ ಸ್ಥಾಪನೆ ಪ್ರತಿ ಗ್ರಂಥಾಲಯಕ್ಕೆ ಪ್ರಾರಂಭಿಕ ವೆಚ್ಚ 1.00 ಲಕ್ಷ ರೂಪಾಯಿಗಳು. | 10.00 |
| 2. | ಪುಸ್ತಕಗಳಿಗೆ – ಗ್ರಾಮ ಪಂಚಾಯಿತಿ ಗ್ರಂಥಾಲಯಗಳಿಗೆ ಒದಗಿಸಲು | 64.00 |
| 3. | ಗ್ರಾಮ ಪಂಚಾಯಿತಿ ಗ್ರಂಥಾಲಯಗಳಿಗೆ ಪೀಠೋಪಕರಣ ಒದಗಿಸಲು | 60.00 |
| | **ಒಟ್ಟು** | **134.00** |

3) ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 35 ಯೋಯೋಕ 2009, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2009**

**[ಇಡಿ: 27: ಸ್ವೀಮರ (ಯುನಿಕ್) 2009 ದಿನಾಂಕ: 27ನೇ ಫೆಬ್ರವರಿ 2009]**

4) 2008–09ನೇ ಸಾಲಿಗೆ ಆಯವ್ಯಯ ಲೆಕ್ಕಶೀರ್ಷಿಕೆ 2205–00–105–0–01 [ಯೋಜನೆ] ಅಡಿಯಲ್ಲಿ ನಿಗದಿಯಾಗಿರುವ ಆಯವ್ಯಯ ಮಿತಿಯೊಳಗೆ ರಾಜ್ಯದ ಗ್ರಾಮ ಪಂಚಾಯಿತಿ ಗ್ರಂಥಾಲಯಗಳಿಗೆ 74.00 ಲಕ್ಷರೂಗಳಲ್ಲಿ [ಎಪ್ಪತ್ತನಾಲ್ಕುಲಕ್ಷರೂಪಾಯಿಗಳು ಮಾತ್ರ] ಅಗತ್ಯ ಪುಸ್ತಕಗಳನ್ನು ಸರಬರಾಜು ಮಾಡಲು ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ. ಪುಸ್ತಕಗಳನ್ನು ಖರೀದಿಸಲು ಈಗಾಗಲೇ ಸರ್ಕಾರವು ಹೊರಡಿಸಿರುವ ನಿಯಮಾವಳಿಗಳನ್ನು ತಪ್ಪದೇ ಪಾಲಿಸಬೇಕೆಂಬ ಷರತ್ತನ್ನು ವಿಧಿಸಿದೆ ಹಾಗೂ ದಿನಾಂಕ: 04.04.2008 ರಂದು ಹೊರಡಿಸಲಾದ 'ಸಂಖ್ಯೆ ಇಡಿ: 78 : ಯೋಯೋಕ 2008,ರ ಸರ್ಕಾರಿ ಆದೇಶದಲ್ಲಿ ನಿಗದಿಗೊಳಿಸಲಾಗಿದ್ದ ಎಲ್ಲಾ ಷರತ್ತುಗಳನ್ನು ತಪ್ಪದೇ ಪಾಲಿಸತಕ್ಕದ್ದು.

5) ಸದರಿ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ:ಶಿ.ಇ:386: ಐ.ಎಫ್.(ಬಿ.&ಎ) 2009 ದಿನಾಂಕ: 16.02.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ಪಿ.ಆರ್. 821

ವಿಶೇಷಾಧಿಕಾರಿಗಳು ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ (ಯೋಜನೆ).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎನ್. ಸುಬ್ಬಣ್ಣ, ಹಿಂದಿನ ತಹಶೀಲ್ದಾರ್ ಕುಂದಾಪುರ (ಪ್ರಸ್ತುತ ನಿವೃತ್ತ) ಇವರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:**

1. ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆ ಇವರ ಪತ್ರ ಸಂ: ಎಡಿಎಂ:ಸಿಆರ್:177/2004–05, ದಿನಾಂಕ:20.09.2005.
2. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂ: ಆರ್‌ಡಿ 47 ಎಡಿಇ 2005, ದಿನಾಂಕ: 28.09.2005.
3. ಶ್ರೀ ಸುಬ್ಬಣ್ಣ, ತಹಶೀಲ್ದಾರ್ ಇವರ ಲಿಖಿತ ಸಮಜಾಯಿಷಿ ದಿನಾಂಕ: 06.10.2005.
4. ಶ್ರೀ ಜಿ.ಟಿ. ಮಂಡಲೀಕರಾವ್, ಹಿಂದಿನ ಶಿರಸ್ತೇದಾರ್, ಕುಂದಾಪುರ ತಾಲ್ಲೂಕು ಕಛೇರಿ, ಇವರ ಲಿಖಿತ ಸಮಜಾಯಿಷಿ ದಿನಾಂಕ: 14.11.2006.

**ಪ್ರಸ್ತಾವನೆ:**

ಶ್ರೀ ಎನ್. ಸುಬ್ಬಣ್ಣ, ತಹಶೀಲ್ದಾರ್ (ಪ್ರಸ್ತುತ ನಿವೃತ್ತರು) ಇವರು ಈ ಹಿಂದೆ ಕುಂದಾಪುರ ತಾಲ್ಲೂಕಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕರ್ನಾಟಕ ಭೂ ಸುಧಾರಣಾ ಕಾಯಿದೆ ಕಲಂ 61 ರಂತೆ ಭೂ ನ್ಯಾಯ ಮಂಡಳಿಯಿಂದ ಮಂಜೂರಾದ ಜಮೀನನ್ನು ಭೂ ನ್ಯಾ ಮಂಡಳಿಯಿಂದ ಅಂತಿಮ ತೀರ್ಪಾದ 15 ವರ್ಷದ ಒಳಗೆ ಪರಭಾರೆ ಮಾಡಲು ನಿರ್ಭಂಧವಿದ್ದರೂ ಸಹ ಕಂದಾವರ ಗ್ರಾಮದ ರಘುರಾಮ ಹೆಗ್ಡೆಯವರ ಮಕ್ಕಳಾದ ಬಾಲಕೃಷ್ಣ ಹೆಗ್ಡೆ ಮತ್ತು ಶ್ರೀಮತಿ ವೆಂಕಮ್ಮ ಹೆಗ್ಗಡತಿ ಎಂಬುವವರಿಗೆ ಕುಂದಾಪುರ ಭೂ ನ್ಯಾಯ ಮಂಡಳಿಯ ಟಿ.ಆರ್.ಐ. ಸಂ: 1682/77–78, 1683/77–78, ದಿನಾಂಕ: 17.03.2003ರಂತೆ ಕುಂದಾಪುರ ಕಸಬಾ ಗ್ರಾಮದ ಸ.ನಂ. 59/6ಎ(ಪಿ1)ರಲ್ಲಿ 0.41 ಎಕರೆ ಸ.ನಂ. 59/5ಎ(ಪಿ1)ರಲ್ಲಿ 0.17 ಎಕರೆ ಜಮೀನಿಗೆ ಸಂಬಂಧಿಸಿದಂತೆ ಅಧಿಭೋಗದ ಹಕ್ಕು ಮಂಜೂರಾದ 15 ವರ್ಷದ ಪರಭಾರೆ ನಿರ್ಬಂಧವಿದ್ದ ಅವಧಿಯಲ್ಲಿ ಅಂದರೆ ದಿನಾಂಕ: 21.04.2003 ರಂದು ಮಾರಾಟ ಮಾಡಲು ನಿರಾಕ್ಷೇಪಣಾ ಪತ್ರ ನೀಡಿರುವುದಾಗಿ ಹಾಗೂ ಇದೇ ವಿಷಯಕ್ಕೆ ಸಂಬಂಧಿಸಿದಂತೆ, ನಿರಾಕ್ಷೇಪಣಾ ದೃಢೀಕರಣ ಪತ್ರ ನೀಡಿರುವುದಾಗಿ ಹಾಗೂ ಇದೇ ವಿಷಯಕ್ಕೆ ಸಂಬಂಧಿಸಿದಂತೆ, ನಿರಾಕ್ಷೇಪಣಾ ದೃಢೀಕರಣ ಪತ್ರ ನೀಡಲು ಕಛೇರಿ ಟಿಪ್ಪಣಿ ಮಂಡಿಸಿ, ಶಿಫಾರಸ್ಸು ಮಾಡಿರುವ ಬಗ್ಗೆ ಹಾಗೂ ಕರ್ತವ್ಯ ನಿಷ್ಠೆ ಇಲ್ಲದೆ ದುರ್ನಡತೆಯನ್ನು ಎಸಗಿರುತ್ತಾರೆ. ಸರ್ಕಾರಿ ಅಧಿಕಾರಿ/ನೌಕರರಾಗಿ ಗಂಭೀರ ಸ್ವರೂಪದ ಕರ್ತವ್ಯಲೋಪ ಎಸಗಿದ ಆರೋಪದ ಮೇಲೆ ಇವರ ಕರ್ನಾಟಕ ನಾಗರೀಕರ ಸೇವಾ (ನಡತೆ) 1966ರ ನಿಯಮಾವಳಿಗಳನ್ನು ಉಲ್ಲಂಘಿಸಿರುವ ಆರೋಪದ ಮೇರೆಗೆ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಓದಲಾದ ಕ್ರ.ಸಂ. ದಿನಾಂಕ: 20.09.2005ರಲ್ಲಿ ಜಿಲ್ಲಾಧಿಕಾರಿಗಳು, ಉಡುಪಿ ಇವರು ಸರ್ಕಾರಕ್ಕೆ ಪ್ರಸ್ತಾನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಶ್ರೀ ಎನ್. ಸುಬ್ಬಣ್ಣ (ನಿ) ತಹಶೀಲ್ದಾರ್ ಹಾಗೂ ಶ್ರೀ ಜಿ.ಟಿ. ಪುಂಡಲೀಕರಾವ್ (ನಿ) ಶಿರಸ್ತೇದಾರ್, ಕುಂದಾಪುರ ಇವರುಗಳಿಗೆ ದೋಷಾರೋಪಣಾ ಪಟ್ಟಿ (ಅನುಬಂಧ 1 ರಿಂದ 4ರವರೆಗೆ) ಸಿಸಿಎ ನಿಯಮಾವಳಿ ಅನ್ವಯ ಮೇಲೆ ಓದಲಾದ ಕ್ರ.ಸಂ.(2)ರ ದಿನಾಂಕ: 28.09.2005ರಂದು ಕಾರಣ ಕೇಳುವ ನೋಟೀಸ್ ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಶ್ರೀ ಎನ್. ಸುಬ್ಬಣ್ಣ, ತಹಶೀಲ್ದಾರ್ ಹಾಗೂ ಶ್ರೀ ಜಿ.ಟಿ. ಪುಂಡಲೀಕರಾವ್, ಹಿಂದಿನ ಶಿರಸ್ತೇದಾರ್, ಕುಂದಾಪುರ ತಾಲ್ಲೂಕು ಕಛೇರಿ ಇವರುಗಳು ಮೇಲೆ ಓದಲಾದ ಕ್ರ.ಸಂ.(3) ಮತ್ತು (4) ದಿನಾಂಕ: 06.10.2005 ಹಾಗೂ 14.11.2006ರಲ್ಲಿ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿ ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗೆಳೆದು ಆರೋಪದಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಸದರಿಯವರ ಲಿಖಿತ ಸಮಜಾಯಿಷಿಯನ್ನು ಸರ್ಕಾರವು ಪರಿಶೀಲಿಸಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13 ರಡಿಯಲ್ಲಿ ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ **ಶ್ರೀ ಹರಿಯಪ್ಪಗೌಡ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ:25, 1ನೇ ಮೈನ್, 2ನೇ ಕ್ರಾಸ್, ಆಂಜನೇಯನಗರ, ಬನಶಂಕರಿ 3ನೇ ಹಂತ, ಬೆಂಗಳೂರು–560085** ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಉಡುಪಿ ಜಿಲ್ಲೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 47 ಎಡಿಇ 2005, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಹಾಗೂ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎನ್. ಸುಬ್ಬಣ್ಣ, ಹಿಂದಿನ ತಹಶೀಲ್ದಾರ್, ಕುಂದಾಪುರ, ಪ್ರಸ್ತುತ ನಿವೃತ್ತ ಹಾಗೂ ಶ್ರೀ ಜಿ.ಟಿ. ಪುಂಡಲೀಕರಾವ್ (ನಿ) ಶಿರಸ್ತೇದಾರ್, ತಹಶೀಲ್ದಾರರ ಕಛೇರಿ, ಕುಂದಾಪುರ ಇವರ ವಿರುದ್ಧ ಮಾಡಲಾಗಿರುವ ಆರೋಪದ ಬಗ್ಗೆ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಲು **ಶ್ರೀ ಹರಿಯಪ್ಪಗೌಡ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ:25, 1ನೇ ಮೈನ್, 2ನೇ ಕ್ರಾಸ್, ಆಂಜನೇಯನಗರ, ಬನಶಂಕರಿ 3ನೇ ಹಂತ, ಬೆಂಗಳೂರು–560085** ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಉಡುಪಿ ಜಿಲ್ಲೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ

ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರು/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂ: ಸಿಆಸುಇ 22 ಸೇಇವಿ 2007, ದಿ:11.4.2008 ರನ್ವಯ ರೂ. 8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ.1,500/– (ಒಂದು ಸಾವಿರದ ಐದನೂರು ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 822

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 36 ಪಅಸೇ 2009, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2009**

**ವಿಷಯ:** ಕೇಂದ್ರೀಯ ವೀರ್ಯಾ ಸಂಕಲನಾ ಕೇಂದ್ರದ ಆವರಣದಲ್ಲಿನ 120 x 160 ಖಾಲಿ ನಿವೇಶನದಲ್ಲಿ ಕರ್ನಾಟಕ ಪಶುವೈದ್ಯಕೀಯ ಪರಿಷತ್ತಿನ ಸಭಾಭವನ ನಿರ್ಮಿಸಲು ಆಡಳಿತಾತ್ಮಕ ಮಂಜೂರಾತಿ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಎಹೆಚ್ಎಫ್ 253 ವಿಇಟಿ 94, ದಿನಾಂಕ: 31.03.1997.
2. ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 173 ಪಅಸೇ 2008, ದಿನಾಂಕ: 03.07.2008.
3. ಆಯುಕ್ತರು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಆಪಸಂ/ಡಿವಿಡಿ–3/ವಿವ–36/2008–09, ದಿನಾಂಕ: 5.1.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದನ್ವಯ ಬೆಂಗಳೂರು ನಗರ ಹೆಬ್ಬಾಳದ ರಾಜ್ಯ ವೀರ್ಯ ಸಂಕಲನಾ ಕೇಂದ್ರದ ಹಿಂಭಾಗದಲ್ಲಿರುವ ಖಾಲಿ ನಿವೇಶನ 119.6'x160 ಅಡಿ ಜಾಗದಲ್ಲಿ ಕರ್ನಾಟಕ ಸ್ಟೇಟ್ ಕನ್‌ಸ್ಟ್ರಕ್ಷನ್ ಕಾರ್ಪೋರೇಷನ್‌ನಿಂದ ರಾಜ್ಯ ಪಶುವೈದ್ಯಕೀಯ ಪರಿಷತ್ತಿನ ಕಟ್ಟಡವನ್ನು ನಿರ್ಮಿಸಲು ಆಡಳಿತಾತ್ಮಕ ಮಂಜೂರಾತಿ ನೀಡಿದೆ. ಅದರಂತೆ ವಿವಿಧ ಹಂತಗಳಲ್ಲಿ ಕಟ್ಟಡ ನಿರ್ಮಾಣ ಕೈಗೊಂಡು ಸೆಪ್ಟೆಂಬರ್ 2003ರಲ್ಲಿ ಕರ್ನಾಟಕ ಪಶುವೈದ್ಯಕೀಯ ಪರಿಷತ್ತಿನ ಕಟ್ಟಡ ಕಾಮಗಾರಿಯನ್ನು ಪೂರ್ಣಗೊಳಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದನ್ವಯ ಕರ್ನಾಟಕ ಪಶುವೈದ್ಯಕೀಯ ಪರಿಷತ್ತಿನಲ್ಲಿ ಪಶುವೈದ್ಯರ ವೃತ್ತಿ ಪರತೆ, ತಾಂತ್ರಿಕ ನೈಪುಣ್ಯತೆಯನ್ನು ಹೆಚ್ಚಿಸಲು ಏರ್ಪಡಿಸುತ್ತಿರುವ ಅನೇಕ ತರಬೇತಿ, ವಿಚಾರ ಸಂಕೀರ್ಣ, ಕಾರ್ಯಾಗಾರವನ್ನು ಈಗಿರುವ ಸ್ಥಳದಲ್ಲಿ ಏರ್ಪಡಿಸಲು ಸಾಧ್ಯವಾಗದಿರುವುದರಿಂದ ಹೆಚ್ಚಿನ ಸ್ಥಳಾವಕಾಶದೊಂದಿಗೆ ಪಶುಪಾಲನಾ ಇಲಾಖಾ ಸಭೆ/ಸಮಾರಂಭಗಳಿಗೂ ಅನುಕೂಲವಾಗುವಂತೆ ಒಂದು ಪ್ರತ್ಯೇಕ ಸಭಾಂಗಣವನ್ನು ಹಾಲಿ ಇರುವ ಪರಿಷತ್ತಿನ ಕಟ್ಟಡದ ಮೂರನೇ ಮಹಡಿಯಲ್ಲಿ ಕರ್ನಾಟಕ ಭೂಸೇನಾ ನಿಗಮ ನಿಯಮಿತದ ವತಿಯಿಂದ ನಿರ್ಮಿಸುವ ಉದ್ದೇಶಕ್ಕಾಗಿ ಲೆಕ್ಕಶೀರ್ಷಿಕೆ:2403–00–101–0–18 ಉಪಶೀರ್ಷಿಕೆ:101 ಸಹಾಯಾನುದಾನ (ಯೋಜನೆ) ಅಡಿಯಲ್ಲಿ ರೂ.35.00 ಲಕ್ಷಗಳಿಗೆ ಮಂಜೂರಾತಿ ನೀಡಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ಆಯುಕ್ತರು,ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಕರ್ನಾಟಕ ಪಶುವೈದ್ಯಕೀಯ ಪರಿಷತ್ತಿನ ಕಟ್ಟಡದಲ್ಲಿ ಉದ್ದೇಶಿತ ಸಭಾಂಗಣ ನಿರ್ಮಿಸುವ ಸಂಬಂಧ ಕಟ್ಟಡ ಕಾಮಗಾರಿ ಕೈಗೊಳ್ಳಲು ಕರ್ನಾಟಕ ಭೂಸೇನಾ ನಿಗಮ ನಿಗಮಕ್ಕೆ ವಹಿಸಿಕೊಟ್ಟಿದೆ. ಈ ಸಂಬಂಧ ನಿಗಮದ ತಾಂತ್ರಿಕ ವ್ಯವಸ್ಥಾಪಕರು ಸಭೆಯಲ್ಲಿ ನೀಡಿದ ವಿವರಗಳನ್ನಾಧರಿಸಿ ಕಟ್ಟಡ ನಿರ್ಮಾಣದ ಬಗ್ಗೆ ವಿವರವಾಗಿ ಚರ್ಚಿಸಿದ್ದು, ಹೆಚ್ಚುವರಿ ವಿನ್ಯಾಸ ಹಾಗೂ ಆರ್ಥಿಕ ಹಿತದೃಷ್ಟಿಯಿಂದ ಪರಿಷತ್ತಿನ 3ನೇ ಮಹಡಿಯಲ್ಲಿ ಸಭಾಂಗಣ ನಿರ್ಮಿಸುವ ಬದಲಾಗಿ ಪರಿಷತ್ತಿನ ಕಟ್ಟಡಕ್ಕೆ ಹೊಂದಿಕೊಂಡಂತೆ ಇರುವ ಪಶುಪಾಲನಾ ಇಲಾಖೆಯ ಕೇಂದ್ರೀಯ ವೀರ್ಯ ಸಂಕಲನಾ ಕೇಂದ್ರದಲ್ಲಿರುವ ಖಾಲಿ ನಿವೇಶನದ ಪೈಕಿ 120 x 160 ಜಾಗವನ್ನು ಪಡೆದು ಪರಿಷತ್ತಿನ ಹಣದಲ್ಲಿ ಸಭಾಭವನ ನಿರ್ಮಿಸುವುದು ಸೂಕ್ತವೆಂದು ದಿನಾಂಕ: 27.11.2008 ರಂದು ನಡೆದ ಸಭೆಯಲ್ಲಿ ನಿರ್ಣಯಿಸಲಾಗಿದೆ. ಆದ್ದರಿಂದ, ಸದರಿ ಜಾಗದಲ್ಲಿ ಸಭಾ ಭವನ ನಿರ್ಮಿಸಲು ಅನುಮತಿ ನೀಡಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಕರ್ನಾಟಕ ಪಶುವೈದ್ಯಕೀಯ ಪರಿಷತ್ತು ಭಾರತೀಯ ಪಶುವೈದ್ಯಕೀಯ ಪರಿಷತ್ತಿನ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಒಂದು ಸ್ವಾಯತ್ತ ಸಂಸ್ಥೆಯಾಗಿದ್ದು, ಕೇಂದ್ರ ಪುರಸ್ಕೃತ ಯೋಜನೆ ಅಡಿ ಶೇ.50 : 50 ಅನುಪಾತದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಂದ ಅನುದಾನ ಪಡೆಯುತ್ತಿರುವ Statutory Corporate Institute ಆಗಿದೆ. ಆರ್ಥಿಕ ಮಿತವ್ಯಯಕಾರಿ ಹಾಗೂ ಹೆಚ್ಚುವರಿ ವಿನ್ಯಾಸದ ದೃಷ್ಟಿಯಿಂದ ಪರಿಷತ್ತಿನ ಮೂರನೇ ಮಹಡಿಯಲ್ಲಿ ನಿರ್ಮಿಸುವ ಬದಲಾಗಿ ಪರಿಷತ್ತಿನ ಕಟ್ಟಡಕ್ಕೆ ಹೊಂದಿಕೊಂಡಿರುವ ಕೇಂದ್ರೀಯ ವೀರ್ಯ ಸಂಕಲನಾ ಕೇಂದ್ರದ ಆವರಣದಲ್ಲಿನ ಖಾಲಿ ಇರುವ ನಿವೇಶನದಲ್ಲಿ 120 x 160 ಅಡಿ ಖಾಲಿ ಜಾಗದಲ್ಲಿ ಸಭಾಭವನ ನಿರ್ಮಿಸಲು ಕರ್ನಾಟಕ ಭೂಸೇನಾ ನಿಗಮಕ್ಕೆ ವಹಿಸಿಕೊಟ್ಟಿರುವುದರಿಂದ, ಸದರಿ ನಿವೇಶನ ನೀಡಲು ಪಶುಪಾಲನಾ ಇಲಾಖಾ ಮುಖ್ಯಸ್ಥರಾದ ಆಯುಕ್ತರು ದಿನಾಂಕ:05.01.2009ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಈ ದಿಸೆಯಲ್ಲಿ ಕರ್ನಾಟಕ ಭೂಸೇನಾ ನಿಗಮದ ತಾಂತ್ರಿಕ ವ್ಯವಸ್ಥಾಪಕರ ಅಭಿಪ್ರಾಯ ಹಾಗೂ ಆಯುಕ್ತರ ಶಿಫಾರಸ್ಸನ್ನು ಪರಿಗಣಿಸಿ, ಹಾಲಿ ಇರುವ ಕಟ್ಟಡದ ಮೂರನೇ ಮಹಡಿಯಲ್ಲಿ ಬದಲಾಗಿ ಪರಿಷತ್‌ಗೆ ಹೊಂದಿಕೊಂಡಂತಿರುವ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಕೇಂದ್ರೀಯ ವೀರ್ಯ ಸಂಕಲನಾ ಕೇಂದ್ರದ ಖಾಲಿ ನಿವೇಶನದ ಪೈಕಿ 120 x 160 ಅಡಿ ಜಾಗದಲ್ಲಿ ಕರ್ನಾಟಕ ಪಶುವೈದ್ಯಕೀಯ ಪರಿಷತ್ತಿನ ಸಭಾಭವನ ನಿರ್ಮಾಣಕ್ಕಾಗಿ ಮಂಜೂರಾತಿ ನೀಡಲು ಸರ್ಕಾರ ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಪಶುವೈದ್ಯಕೀಯ ಪರಿಷತ್ತು ಹೆಚ್ಚಿನ ಸ್ಥಳಾವಕಾಶದೊಂದಿಗೆ ರಾಜ್ಯ ಪಶುವೈದ್ಯಕೀಯ ವೃತ್ತಿಪರರ ನೈಪುಣ್ಯತೆಯನ್ನು ಹೆಚ್ಚಿಸಲು ತರಬೇತಿ, ವಿಚಾರ ಸಂಕಿರಣ ಹಾಗೂ ಕಾರ್ಯಾಗಾರಗಳನ್ನು ವಸತಿ ಸೌಲಭ್ಯದೊಂದಿಗೆ ನಡೆಸಲು ಮತ್ತು ಪಶುಪಾಲನಾ ಇಲಾಖೆಯ ಸಭೆ–ಸಮಾರಂಭಗಳನ್ನು ಏರ್ಪಡಿಸಲು ಅನುಕೂಲವಾಗುವಂತೆ ಕರ್ನಾಟಕ ಪಶುವೈದ್ಯಕೀಯ ಪರಿಷತ್ತಿನ ಕಟ್ಟಡದ ಮೂರನೇ ಮಹಡಿ ಬದಲಾಗಿ, ಕಟ್ಟಡಕ್ಕೆ ಹೊಂದಿಕೊಂಡಂತೆ ಅದರ ಹಿಂಭಾಗದಲ್ಲಿರುವ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಕೇಂದ್ರಿಯ ವೀರ್ಯ ಸಂಕಲನಾ ಕೇಂದ್ರದ ಆವರಣದಲ್ಲಿ ಖಾಲಿ ಇರುವ ನಿವೇಶನದ 120 x 160 ಅಡಿ ಜಾಗದಲ್ಲಿ ಸರ್ಕಾರದಿಂದ ಹೆಚ್ಚಿನ ಅನುದಾನ ಕೋರದೇ ಈಗಾಗಲೇ ಉಲ್ಲೇಖ(2)ರ ಸರ್ಕಾರಿ ಆದೇಶದಲ್ಲಿ ಮಂಜೂರು ಮಾಡಿರುವ ರೂ.35.00 ಲಕ್ಷಗಳ ಅನುದಾನದಲ್ಲಿಯೇ ವೆಚ್ಚಭರಿಸುವ ಷರತ್ತಿಗೊಳಪಟ್ಟು ಸಭಾಭವನ ನಿರ್ಮಿಸಲು ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕೆ. ಶ್ರೀನಿವಾಸಮೂರ್ತಿ**

ಪಿ.ಆರ್. 823

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, (ಪಶುಸಂಗೋಪನೆ).

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 169 ಪಸಸೇ 2008, ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2009**

**ವಿಷಯ:** ಡಾ: ರಾಜಣ್ಣ ಟಿ., ಪಶುವೈದ್ಯಾಧಿಕಾರಿ, ಪಶುಚಿಕಿತ್ಸಾಲಯ, ಕಬನೂರು, ಶಿಗ್ಗಾಂವ್ ತಾಲ್ಲೂಕು, ಹಾವೇರಿ ಜಿಲ್ಲೆ ಇವರನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕುವ (Discharge) ಬಗ್ಗೆ.

**ಓದಲಾಗಿದೆ:** ಆಯುಕ್ತರು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಆಪಸಂ/ಸಿಬ್ಬಂದಿ–2/ವಿವ–113/2006–07, ದಿನಾಂಕ:12.06.2008 ಹಾಗೂ 29.01.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಅಧಿಸೂಚನೆ ಸಂಖ್ಯೆ: ಪಸಂಮೀ 46 ಪಸಸೇ 2006, ದಿನಾಂಕ: 2.5.2006 ರನ್ವಯ ಇಲಾಖೆಯ ಪಶುವೈದ್ಯಾಧಿಕಾರಿ ಹುದ್ದೆಗೆ ನೇಮಕಾತಿ ಹೊಂದಿರುವ ಡಾ: ರಾಜಣ್ಣ ಟಿ. ಪಶುವೈದ್ಯಾಧಿಕಾರಿ ಇವರನ್ನು ಪಶುಚಿಕಿತ್ಸಾಲಯ, ಕಬನೂರು, ಶಿಗ್ಗಾಂವ್ ತಾಲ್ಲೂಕು, ಹಾವೇರಿ ಜಿಲ್ಲೆ ಇಲ್ಲಿಗೆ ನೇಮಿಸಲಾಗಿದ್ದು, ಸದರಿ ಅಧಿಕಾರಿಗಳು ನೇಮಿಸಿದ ಸ್ಥಳದಲ್ಲಿ ದಿನಾಂಕ:12.05.2006 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ಹಾವೇರಿ ಜಿಲ್ಲಾ ಉಪನಿರ್ದೇಶಕರು ಕಬನೂರು ಪಶುಚಿಕಿತ್ಸಾಲಯಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಡಾ:ರಾಜಣ್ಣ ಟಿ. ದಿನಾಂಕ: 3.11.2006 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದನ್ನು ಗಮನಿಸಿ ಈ ಬಗ್ಗೆ ಕರ್ತವ್ಯ ಲೋಪ ಎಸಗಿದ್ದಕ್ಕೆ ಸಮಜಾಯಿಸಿ ನೀಡುವಂತೆ ನೋಟೀಸ್ ಜಾರಿ ಮಾಡಿದ್ದು, ಈ ಬಗ್ಗೆ ಸದರಿ ಅಧಿಕಾರಿಗಳು ಉಪನಿರ್ದೇಶಕರನ್ನು ಖುದ್ದಾಗಿ ಭೇಟಿ ಮಾಡಿ ವೈಯಕ್ತಿಕ ಕಾರಣಗಳಿಂದ ದಿನಾಂಕ:2.12.2006ರಿಂದ ಜಾರಿಗೆ ಬರುವಂತೆ ರಾಜೀನಾಮೆ ಅಂಗೀಕರಿಸಬೇಕೆಂದು ಉಪನಿರ್ದೇಶಕರನ್ನು ಕೋರಿರುತ್ತಾರೆಂದು ಆಯುಕ್ತರು ತಿಳಿಸಿರುತ್ತಾರೆ. ಡಾ:ರಾಜಣ್ಣ.ಟಿ., ಪಶುವೈದ್ಯಾಧಿಕಾರಿಯವರು ದಿನಾಂಕ:3.11.2006 ರಿಂದ ಕರ್ತವ್ಯಕ್ಕೆ ಗೈರುಹಾಜರಾಗಿದ್ದು ದಿನಾಂಕ:20.12.2006 ರಂದು ರಾಜೀನಾಮೆ ಸಲ್ಲಿಸಿದ ನಂತರ ಕೆಲಸಕ್ಕೆ ಹಾಜರಾಗಿರುವುದಿಲ್ಲವೆಂದು ಹಾಗೂ ಕಬನೂರು ಪಶುಚಿಕಿತ್ಸಾಲಯದ ಸಂಪೂರ್ಣ ಪ್ರಭಾರವನ್ನು ಹಸ್ತಾಂತರಿಸಿರುತ್ತಾರೆಂದು

ಆಯುಕ್ತರು ತಿಳಿಸಿರುತ್ತಾರೆ. ಸದರಿ ಅಧಿಕಾರಿಯಿಂದ ಸರ್ಕಾರಕ್ಕೆ ಬರಬೇಕಾಗಿದ್ದ ರೂ.382–00ನ್ನು ಖಜಾನೆಗೆ ಜಮಾ ಮಾಡಿದ್ದು ಅವರಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಯಾವುದೂ ಇಲ್ಲವಾದ್ದರಿಂದ ಸದರಿ ಅಧಿಕಾರಿಯವರ ರಾಜೀನಾಮೆ ಅಂಗಿಕರಿಸುವಂತೆ ಹಾವೇರಿ ಜಿಲ್ಲಾ ಉಪನಿರ್ದೇಶಕರು ಶಿಫಾರಸ್ಸು ಮಾಡಿರುವುದರಿಂದ ಡಾ:ರಾಜಣ್ಣ.ಟಿ., ಇವರು ನೀಡಿರುವ ರಾಜೀನಾಮೆಯನ್ನು ದಿನಾಂಕ:20.12.2006ರಿಂದ ಅನ್ವಯವಾಗುವಂತೆ ಅಂಗೀಕರಿಸಲು ಅಥವಾ ಇನ್ನೂ ಖಾಯಂ ಪೂರ್ವ ಸೇವಾವಧಿ ಘೋಷಣೆಯಾಗದೇ ಇರುವುದರಿಂದ ಅವರನ್ನು ಸೇವೆಯಿಂದ ತೆಗೆದುಹಾಕಲು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) 1977ರ ನಿಯಮ 6ರನ್ವಯ ಪರಿಗಣಿಸಬಹುದೆಂದು ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ.

2. ಡಾ:ರಾಜಣ್ಣ.ಡಿ., ಪಶುವೈದ್ಯಾಧಿಕಾರಿ ಇವರು ಪರೀಕ್ಷಾರ್ಥ ಅವಧಿಯಲ್ಲಿರುವಾಗಲೇ ಸಕ್ಷಮ ಪ್ರಾಧಿಕಾರದಿಂದ ರಜೆ ಮಂಜೂರಾತಿ ಮಾಡಿಸಿಕೊಳ್ಳದೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯ ಲೋಪವೆಸಗಿ ದುರ್ವರ್ತನೆ ತೋರಿರುತ್ತಾರೆ ಹಾಗೂ ಕಛೇರಿಯ ದೈನಂದಿನ ಕೆಲಸಗಳಿಗೆ ತೊಂದರೆ ಉಂಟು ಮಾಡಿರುತ್ತಾರೆ. ನಂತರ ವೈಯಕ್ತಿಕ ಕಾರಣದ ಮೇರೆಗೆ ಪಶುವೈದ್ಯಾಧಿಕಾರಿ ಹುದ್ದೆಗೆ ರಾಜೀನಾಮೆ ನೀಡಿದ್ದು ಅದು ಅಂಗೀಕಾರಗೊಳ್ಳುವ ಮೊದಲೇ ಕರ್ತವ್ಯಕ್ಕೆ ಗೈರುಹಾಜರಾಗಿರುತ್ತಾರೆ. ಇದರಿಂದಾಗಿ ಸದರಿ ಅಧಿಕಾರಿಗೆ ಸರ್ಕಾರಿ ಸೇವೆಯಲ್ಲಿ ಕಾರ್ಯನಿರ್ವಹಿಸಲು ಇಷ್ಟವಿಲ್ಲದಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಈ ದಿಸೆಯಲ್ಲಿ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಡಾ:ರಾಜಣ್ಣ.ಟಿ. ಅವರಿಗೆ ಸರ್ಕಾರಿ ಸೇವೆಯಲ್ಲಿ ಮುಂದುವರೆಯುವಲ್ಲಿ ಅನಾಸಕ್ತಿ ಹಾಗೂ ಪರೀಕ್ಷಾರ್ಥ ಅವಧಿಯಲ್ಲಿ ದುರ್ವರ್ತನೆ ತೋರಿರುವುದನ್ನು ಗಂಭೀರವಾಗಿ ಪರಿಗಣಿಸಿ ರಾಜೀನಾಮೆ ಅಂಗೀಕರಿಸುವ ಬದಲು ಸದರಿ ಅಧಿಕಾರಿಯನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರ ನಿಯಮ 6(1)ರನ್ವಯ ಸೇವೆಯಿಂದ ತೆಗೆದುಹಾಕಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಆದೇಶ**

3. ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ:ರಾಜಣ್ಣ.ಟಿ., ಪಶುವೈದ್ಯಾಧಿಕಾರಿ, ಪಶುಚಿಕಿತ್ಸಾಲಯ, ಕಬನೂರು, ಶಿಗ್ಗಾಂವ್ ತಾಲ್ಲೂಕು, ಹಾವೇರಿ ಜಿಲ್ಲೆ ಇವರು ಮೇಲಾಧಿಕಾರಿಗಳಿಂದ ರಜೆ ಮಂಜೂರಾತಿ ಮಾಡಿಸಿಕೊಳ್ಳದೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕಛೇರಿಯ ದೈನಂದಿನ ಕೆಲಸಗಳಿಗೆ ತೊಂದರೆ ಉಂಟು ಮಾಡಿ ಕರ್ತವ್ಯಲೋಪವೆಸಗಿರುವುದರಿಂದ ಹಾಗೂ ರಾಜೀನಾಮೆ ಅಂಗೀಕಾರಗೊಳ್ಳುವ ಮೊದಲೇ ಕರ್ತವ್ಯಕ್ಕೆ ಗೈರುಹಾಜರಾಗಿ ಪರೀಕ್ಷಾರ್ಥ ಅವಧಿಯಲ್ಲಿ ದುರ್ವರ್ತನೆ ತೋರಿರುವುದು ದೃಢಪಟ್ಟಿರುವುದರಿಂದ, ಸದರಿ ಅಧಿಕಾರಿಯನ್ನು ಆಯುಕ್ತರ ಶಿಫಾರಸ್ಸಿನಂತೆ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರ ನಿಯಮ 6(1)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದುಹಾಕಲು (Discharge) ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ನಾಗರಾಜು**

ಪಿ.ಆರ್. 824

ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, (ಪಶುಸಂಗೋಪನೆ–ಎ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಡಿ.ಮಲ್ಲು, ಕೆ.ಎ.ಎಸ್. (ಸೂ.ಟೈಂ) ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ನೋಟೀಸ್ ಸಂ: ಸಿಆಸುಇ 295 ಎಸ್‌ಇಎನ್ 06 ದಿ:25.08.06.
2. ಶ್ರೀ ಡಿ.ಮಲ್ಲು, ಕೆ.ಎ.ಎಸ್. ಅಧಿಕಾರಿ ರವರ ಲಿಖಿತ ಹೇಳಿಕೆ ದಿ:02.03.07.
3. ಸರ್ಕಾರ ಆದೇಶ ಸಂ:ಸಿಆಸುಇ 295 ಎಸ್‌ಇಎನ್ 06 ದಿ:17.05.2007.
4. ಶ್ರೀ ಎಸ್. ಇಂಧುದರ್ ನಿವೃತ್ತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು, ಇವರ ವಿಚಾರಣಾ ವರದಿ ದಿನಾಂಕ:04/09-09-08.

**ಪ್ರಸ್ತಾವನೆ:**

ಶ್ರೀ ಡಿ. ಮಲ್ಲು, ಕೆ.ಎ.ಎಸ್. (ಸೂ.ಟೈಂ) ಅಧಿಕಾರಿ ಇವರನ್ನು ಸರ್ಕಾರದ ಅಧಿಸೂಚನೆ ಸಂ: ಸಿಆಸುಇ 75 ಅಸೇವ 06 ದಿ:04.05.06 ರಲ್ಲಿ ಬೆಂಗಳೂರು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಹುದ್ದೆಯಿಂದ ಗದಗ್ ಜಿಲ್ಲಾ ಪಂಚಾಯತ್ ಹುದ್ದೆಗೆ ವರ್ಗಾಯಿಸಿದ್ದರೂ, ಇವರು ವರ್ಗಾಯಿಸಿದ ಹುದ್ದೆಗೆ ಹಾಜರಾಗದೇ ಸರ್ಕಾರದ ನಿರ್ದೇಶನವನ್ನು/ ಆದೇಶವನ್ನು ನಿರ್ಲಕ್ಷಿಸಿ ಕರ್ತವ್ಯಚ್ಯುತಿ ಎಸಗಿರುವ ಆರೋಪದ ಸಂಬಂಧ ಮೇಲೆ ಓದಲಾದ ಕ್ರಮ ಸಂ(1)ರಲ್ಲಿ ಸದರಿ ಅಧಿಕಾರಿಗೆ ಸಿಸಿಎ ನಿಯಮಾವಳಿಗಳ ನಿಯಮ (11)ರಡಿ ನೋಟೀಸಿನೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಅದರಂತೆ ಮೇಲೆ ಓದಲಾದ ಕ್ರಮ ಸಂ(2)ರಲ್ಲಿ ಆಪಾದಿತ ಅಧಿಕಾರಿಯು ನೋಟೀಸ್‌ಗೆ ಲಿಖಿತ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿದರು.

ಆದುದರಿಂದ ಸದರಿಯವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಮೇಲೆ ಕ್ರಮ ಸಂ(3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎಸ್. ಇಂಧುದರ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ (4) ರಲ್ಲಿ ಸರ್ಕಾರಕ್ಕೆ ವರದಿಯನ್ನು ನೀಡಿ ಸದರಿ ಅಧಿಕಾರಿಯ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಅಧಿಕಾರಿಯ ಮತ್ತು ಪತ್ನಿಯ ಅನಾರೋಗ್ಯದ ಕಾರಣ ಶ್ರೀಯುತರು ದಿ:15.05.06 ರಿಂದ 12.09.06ರವರೆಗೆ ವರ್ಗಾಯಿಸಿದ ಸ್ಥಳದಲ್ಲಿ ಹಾಜರಾಗಿರುವುದಿಲ್ಲ. ನಂತರ ದಿ:13.09.06 ರಂದು ಗದಗ್‌ನಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಹಾಗೂ ವೈದ್ಯಕೀಯ ಮಂಡಳಿಯೂ ಸಹ ಅಧಿಕಾರಿಯ ಅನಾರೋಗ್ಯದಿಂದ ಬಳಲುತ್ತಿರುವುದಾಗಿ ವರದಿ ನೀಡಿರುತ್ತಾರೆ. ಈ ಹಿನ್ನೆಲೆಯಲ್ಲಿ ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸದ ನಂತರ ಅಂಗೀಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 295 ಎಸ್‌ಇಎನ್ 2006, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ಡಿ.ಮಲ್ಲು ಕೆ.ಎ.ಎಸ್ (ಸೂ.ಟೈಂ) ಅಧಿಕಾರಿ ಅವರನ್ನು ದಿ:25.08.2006ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ. ಹಾಗೂ ಇನ್ನು ಮುಂದೆ ಇಂತಹ ಪ್ರಸಂಗಗಳಿಗೆ ಎಡೆ ಮಾಡಿಕೊಡದೇ ಎಚ್ಚರಿಕೆ ವಹಿಸುವಂತೆ ಸೂಚಿಸಲಾಗಿದೆ. ಹಾಗೆಯೇ ಇವರು ಗೈರು ಹಾಜರಾದ ಅವಧಿ ಅಂದರೆ ದಿ:05.05.06 ರಿಂದ ದಿ:12.09.06ನ್ನು ಇವರ ಲೆಕ್ಕದಲ್ಲಿರುವ ರಜೆಯೆಂದು ಪರಿಗಣಿಸಿ ಆದೇಶಿಸಲಾಗಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 828

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

**ವಿಷಯ:** ಶ್ರೀ ಎಸ್. ಇಂಧುದರ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು–ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ:ಸಿಆಸುಇ 295 ಎಸ್‌ಇಎನ್ 06 ದಿನಾಂಕ: 17.05.2007.
2. ವಿಚಾರಣಾಧಿಕಾರಿರವರ ವರದಿ ದಿ:04/09.09.08.
3. ವಿಚಾರಣಾಧಿಕಾರಿರವರ ವರದಿ ದಿ:04/09.09.08.

**ಪ್ರಸ್ತಾವನೆ:**

ಮೇಲೆ ಕ್ರಮ ಸಂ(1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಡಿ.ಮಲ್ಲು ಕೆ.ಎ.ಎಸ್. (ಸೂ.ಟೈಂ) ಅಧಿಕಾರಿ ಇವರನ್ನು ಸರ್ಕಾರದ ಅಧಿಸೂಚನೆ ಸಂ: ಸಿಆಸುಇ 75 ಅಸೇವ 06 ದಿ:04.05.06 ರಲ್ಲಿ ಬೆಂಗಳೂರು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಹುದ್ದೆಯಿಂದ ಗದಗ್ ಜಿಲ್ಲಾ ಪಂಚಾಯತ್ ಹುದ್ದೆಗೆ ವರ್ಗಾಯಿಸಿದ್ದರೂ, ಇವರು ಸದರಿ ವರ್ಗಾಯಿಸಿದ ಹುದ್ದೆಗೆ ಹಾಜರಾಗದೇ ಸರ್ಕಾರದ ನಿರ್ದೇಶನವನ್ನು/ಆದೇಶವನ್ನು ನಿರ್ಲಕ್ಷಿಸಿ ಕರ್ತವ್ಯಚ್ಯುತಿ ಎಸಗಿರುವ ಆರೋಪದ ಸಂಬಂಧ ಕುರಿತು ವಿಚಾರಣೆ ನಡೆಸಲು ಮೇಲೆ ಓದಲಾದ ಉಲ್ಲೇಖ (1) ಸರ್ಕಾರಿ ಆದೇಶದಲ್ಲಿ ಶ್ರೀ ಎಸ್. ಇಂಧುದರ, ನಿವೃತ್ತ ಜಿಲ್ಲಾ ಮತ್ತು ಸೆಕ್ಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಈ ಪ್ರಕರಣದಲ್ಲಿ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ(2)ರಲ್ಲಿ ಓದಲಾದ ದಿ:04/09.09.08 ರಲ್ಲಿ ವಿಚಾರಣೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂ(3)ರಲ್ಲಿ ಓದಲಾದ ಮನವಿಯಲ್ಲಿ ವಿಚಾರಣಾಧಿಕಾರಿಯವರು ವಿಚಾರಣೆಯನ್ನು ನಡೆಸಿರುವ ಸಂಬಂಧ ಗೌರವಧನ ಹಾಗೂ ಪ್ರಯಾಣ ಭತ್ಯೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಆದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂ:ಸಿಆಸುಇ 295 ಎಸ್‌ಇಎನ್ 06, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ ಎಸ್.ಇಂಧುದರ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರಿಗೆ ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಿದ್ದಕ್ಕಾಗಿ ಸರ್ಕಾರಿ ಆದೇಶ ಸಂ:ಸಿಆಸುಇ 16 ಸೇಇವಿ 05 ದಿ:23.08.05 ರನ್ವಯ ರೂ.6000.00 (ಆರು ಸಾವಿರ ರೂಪಾಯಿಗಳು ಮಾತ್ರ)

ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂ:ಸಿಆಸುಇ 45 ಸೇಇವಿ 01 ದಿ:04.03.02 ರನ್ವಯ ರೂ.1000.00 (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳ ಪ್ರಯಾಣ ಭತ್ಯೆಯನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ 2052–ಸಚಿವಾಲಯ–ಸಾಮಾನ್ಯ ಸೇವೆಗಳು–090–ಸಚಿವಾಲಯ–01, ಕರ್ನಾಟಕ ಸರ್ಕಾರ ಸಚಿವಾಲಯ–051–ಸಾಮಾನ್ಯ ವೆಚ್ಚಗಳು ರಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 829 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಬಿಳಿಗಿರಿರಂಗನಬೆಟ್ಟದಲ್ಲಿರುವ ಇಲಾಖಾ ಕಟ್ಟಡಗಳನ್ನು ತಾತ್ಕಾಲಿಕವಾಗಿ ಮೊರಾರ್ಜಿ ದೇಸಾಯಿ ವಸತಿ ಶಾಲೆಗಾಗಿ ನೀಡುವ ಕುರಿತು.

**ಓದಲಾಗಿದೆ:**
1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸರೇಕೃಕ್ಷೇ/ಬಿಬೆ/ಕಟ್ಟಡ/2/06–07, ದಿನಾಂಕ: 17.03.2008.
2. ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಸಕಇ/166/ಸಮನ್ವಯ2008, ದಿನಾಂಕ: 4.9.2008.

**ಪ್ರಸ್ತಾವನೆ:**

ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಬಿಳಿಗಿರಿರಂಗನಬೆಟ್ಟದಲ್ಲಿರುವ 2 ಕಟ್ಟಡಗಳನ್ನು ಸಮಾಜ ಕಲ್ಯಾಣ ಇಲಾಖೆಯ ಪರಿಶಿಷ್ಟ ಜಾತಿ ಮೊರಾರ್ಜಿ ದೇಸಾಯಿ ವಸತಿ ಶಾಲೆ ಪ್ರಾರಂಭಿಸಲು ಕೋರಿದ್ದರಿಂದ ಈ ಬಗ್ಗೆ ಪರಿಶೀಳಿಸಿ ವರದಿ ನೀಡುವಂತೆ ರೇಷ್ಮೆ ಜಂಟಿ ನಿರ್ದೇಶಕರು, ಮೈಸೂರು ಇವರನ್ನು ಕೋರಲಾಗಿತ್ತು. ಅವರು ಬಿಳಿಗಿರಿರಂಗನಬೆಟ್ಟದಲ್ಲಿರುವ ಕಟ್ಟಡ ಸಂಖ್ಯೆ: 70 ಹಾಗೂ 264 ಗಳನ್ನು ತಾತ್ಕಾಲಿಕವಾಗಿ ಮೊರಾರ್ಜಿ ದೇಸಾಯಿ ವಸತಿ ಶಾಲೆ ಪ್ರಾರಂಭಿಸಲು ನೀಡಬಹುದಾಗಿದ್ದು, ಕಟ್ಟಡವನ್ನು ಹಿಂದಿರುಗಿಸುವಾಗ, ಸುಸ್ಥಿತಿಯಲ್ಲಿ ಹಿಂದಿರುಗಿಸುವ ಷರತ್ತು ವಿಧಿಸಿ ಹಸ್ತಾಂತರಿಸಬಹುದೆಂದು ಅಭಿಪ್ರಾಯ ನೀಡಿರುವುದರಿಂದ ಅದರಂತೆ, ಕಟ್ಟಡ ಸಂಖ್ಯೆ 70 ಹಾಗೂ 264ಗಳನ್ನು ಮೊರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆ ಪ್ರಾರಂಭಿಸಲು ನೀಡುವುದಕ್ಕೆ ಸರ್ಕಾರದ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ.

ರಾಜ್ಯದಲ್ಲಿ ರೇಷ್ಮೆ ಇಲಾಖೆಯು ಬಹಳಷ್ಟು ಕಡೆ ರೇಷ್ಮೆ ಘಟಕಗಳನ್ನು ನಿರ್ಮಿಸಿದ್ದು, ಕೆಲವು ಘಟಕಗಳನ್ನು ಉಪಯೋಗಿಸದೇ ಹಾಗೆ ಇರುವುದರಿಂದ, ಉಪಯೋಗಿಸದೇ ಹಾಗೆ ಇರುವ ರೇಷ್ಮೆ ಘಟಕಗಳನ್ನು ತಮ್ಮ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸಮಾಜಕಲ್ಯಾಣ ಇಲಾಖೆ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗಳಲ್ಲಿ ಸ್ವಂತ ಕಟ್ಟಡ ಇಲ್ಲದಿರುವ ವಿದ್ಯಾರ್ಥಿ ನಿಲಯ ವಸತಿ ಶಾಲೆಗಳಿಗೆ ನೀಡುವಂತೆ ಮೇಲೆ ಓದಲಾದ ಕ್ರಮಸಂಖ್ಯೆ(2)ರ ಪತ್ರದಲ್ಲಿ ಕಾರ್ಯದರ್ಶಿ, ಸಮಾಜಕಲ್ಯಾಣ ಇಲಾಖೆ ಇವರು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯನ್ನು ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ ರೇಷ್ಮೆ ಆಯುಕ್ತರ ಪ್ರಸ್ತಾವನೆಯಲ್ಲಿ ಪರಿಶೀಲಿಸಲಾಗಿದ್ದು, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 16 ರೇಯೋವಿ 2006, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2009**

ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಬಿಳಿಗಿರಿರಂಗನಬೆಟ್ಟದಲ್ಲಿರುವ ರೇಷ್ಮೆ ಇಲಾಖೆಯ ಕಟ್ಟಡ ಸಂಖ್ಯೆ 70 ಹಾಗೂ 264 ಗಳನ್ನು ಮೊರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆಯನ್ನು ಪ್ರಾರಂಭಿಸಲು ತಾತ್ಕಾಲಿಕವಾಗಿ ಸಮಾಜಕಲ್ಯಾಣ ಇಲಾಖೆಗೆ ನೀಡುವುದಕ್ಕೆ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 886 **ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ತಿದ್ದುಪಡಿ

**ಸಂಖ್ಯೆ: ಸಿಐ 19 ಎಸ್ ಜಿಎಫ್ 2008 (ಭಾಗ 3), ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2009**

**ವಿಷಯ:** 2007–08ನೇ ಸಾಲಿನಲ್ಲಿ ಕಬ್ಬು ಬೆಳೆದ ರೈತರಿಗೆ ಹಾಗೂ ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು.

ಸರ್ಕಾರದ ಆದೇಶ ಸಂಖ್ಯೆ ಸಿಇ 19 ಎಸ್‌ಜಿಎಫ್ 2008(4) ದಿನಾಂಕ: 02.01.2009ರಲ್ಲಿನ ಆದೇಶದ ಅನುಬಂಧದಲ್ಲಿರುವ ಕ್ರಮ ಸಂಖ್ಯೆ 18 ರಲ್ಲಿರುವ ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ (ನಿ) ಎಂಬುದನ್ನು **"ಶ್ರೀ ಅಂಬಿಕಾ ಶುಗರ್ಸ್ (ಲಿ) ಚುಂಚನಕಟ್ಟೆ, (ಗುತ್ತಿಗೆದಾರರು ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಚುಂಚನಕಟ್ಟೆ)"** ಎಂದು ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 887

**ಪಿ. ಆನಂದ್‌ಕುಮಾರ್**

ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀಮತಿ ಲತಾ ಎನ್. ಉಮರ್ಜಿ, ನಿವೃತ್ತ ಅಧೀಕ್ಷಕರು, ಇವರ ಕಾಲಮಿತಿ ವೇತನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಪತ್ರ ಸಂಖ್ಯೆ:ನಿಸಿಮು/24/2004–05 ದಿ: 02.04.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಪ್ರಸ್ತಾವನೆ ಸಲ್ಲಿಸಿದ್ದು ಶ್ರೀಮತಿ ಲತಾ ಎನ್.ಉಮರ್ಜಿ, ನಿವೃತ್ತ ಅಧೀಕ್ಷಕರು, ಇವರು ದಿ: 01.04.1980 ರಿಂದ ಮುಖ್ಯ ಸೇವಿಕ ಹುದ್ದೆಯಲ್ಲಿ ಯಾವುದೇ ಪದೋನ್ನತಿ ಪಡೆಯದೇ 10 ವರ್ಷಗಳ ಸೇವೆ ಸಲ್ಲಿಸಿರುವುದರಿಂದ ದಿನಾಂಕ:01.04.1990 ರಿಂದ ಅನ್ವಯವಾಗುವಂತೆ ರೂ.1280–2375 ರ ವೇತನ ಶ್ರೇಣಿಯನ್ನು ಕರ್ನಾಟಕ ನಾಗರೀಕ ಸೇವಾ (ಕಾಲಮಿತಿ ವೇತನ ಬಡ್ತಿ) ನಿಯಮಗಳು 1983ರ ನಿಯಮ 3 ರನ್ವಯ ಕಾಲಮಿತಿ ವೇತನ ಬಡ್ತಿಯನ್ನು ಮಂಜೂರು ಮಾಡಿ 4 ರನ್ವಯ ವೇತನ ಪುನರ್ ನಿಗಧಿಪಡಿಸುವಂತೆ ಕೋರಿರುತ್ತಾರೆ.

ಶ್ರೀಮತಿ ಲತಾ ಎನ್.ಉಮರ್ಜಿ, ನಿವೃತ್ತ ಅಧೀಕ್ಷಕರು, ಇವರ 1985 ರಿಂದ 1990 ರವರೆಗಿನ ಸಾಲಿನ ರಹಸ್ಯ ವರದಿಗಳು ಲಭ್ಯವಿದ್ದು, ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲವೆಂದು ಹಾಗೂ ಇವರ ವಿರುದ್ಧ ಯಾವುದೇ ಶಿಸ್ತು ಕ್ರಮ ಇರುವುದಿಲ್ಲವೆಂದು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರು ಧೃಡೀಕರಿಸಿರುತ್ತಾರೆ. ಆದುದರಿಂದ ಇಲಾಖೆಯ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 216 ಎಸ್‌ಜೆಡಿ 2009, ಬೆಂಗಳೂರು, ದಿನಾಂಕ: 6ನೇ ಮಾರ್ಚ್ 2009**

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಶ್ರೀಮತಿ ಲತಾ ಎನ್.ಉಮರ್ಜಿ, ನಿವೃತ್ತ ಅಧೀಕ್ಷಕರು, ಇವರು ದಿ: 01.04.1980 ರಿಂದ ಮುಖ್ಯ ಸೇವಿಕ ಹುದ್ದೆಯಲ್ಲಿ ಯಾವುದೇ ಪದೋನ್ನತಿ ಪಡೆಯದೇ 10 ವರ್ಷಗಳ ಸೇವೆ ಸಲ್ಲಿಸಿರುವುದರಿಂದ ಅವರಿಗೆ ದಿ:01.04.1990 ರಿಂದ ಅನ್ವಯವಾಗುವಂತೆ ರೂ.1280–2375 ರ ವೇತನ ಶ್ರೇಣಿಯನ್ನು ಕರ್ನಾಟಕ ನಾಗರೀಕ ಸೇವಾ (ಕಾಲಮಿತಿ ವೇತನ ಬಡ್ತಿ) ನಿಯಮಗಳೂ 1983 ರ ನಿಯಮ 3 ರನ್ವಯ ಕಾಲಮಿತಿ ವೇತನ ಬಡ್ತಿಯನ್ನು ಮಂಜೂರಾತಿ ಮಾಡಿ, 4 ರನ್ವಯ ವೇತನ ನಿಗಧಿಪಡಿಸಿ ಆದೇಶಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಸಕಕಾ 180 ಆಂಆಸ 09 ದಿನಾಂಕ: 18.02.2009 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನರಸಿಂಹಯ್ಯ**

ಪಿ.ಆರ್. 889

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ),
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಿಷಯ:** ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮಕ್ಕೆ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಲು ಉಪಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು ರವರ ಕಛೇರಿಯ ಪತ್ರ ಸಂಖ್ಯೆ:ಮಅನಿ/ಸಿಬ್ಬಂದಿ/ಪ್ರವ್ಯ–2/ನಿಯೋಜನೆ/85/2005–06 ದಿನಾಂಕ: 5.1.2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿ: 5.1.2009 ರ ಪತ್ರದಲ್ಲಿ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು ರವರು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಿ ನಿರ್ದೇಶಕರ ಮಂಡಳಿಯಲ್ಲಿ ಮಂಡಿಸಲು ಸರ್ಕಾರದ ಅನುಮತಿಯನ್ನು ಕೋರಿರುತ್ತಾರೆ.

ಪ್ರಧಾನ ವ್ಯವಸ್ಥಾಪಕರ ಪ್ರಸ್ತಾವನೆಯನ್ನು ಪರಿಶೀಲಿಸಿ, ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಲು ಉಪಸಮಿತಿಯೊಂದನ್ನು ರಚಿಸಲು ತೀರ್ಮನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಮಮಇ 613 ಎಸ್‌ಜಿಡಿ 2008, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2009**

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಲು ಈ ಕೆಳಕಂಡ ಉಪಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ರಚಿಸಿದೆ.

1. ನಿರ್ದೇಶಕರು – ಅಧ್ಯಕ್ಷರು<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
2. ಸರ್ಕಾರದ ಅಪರ ಕಾರ್ಯದರ್ಶಿ, – ಸದಸ್ಯರು<br>ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ
3. ಸರ್ಕಾರದ ಉಪಕಾರ್ಯದರ್ಶಿ, – ಸದಸ್ಯರು<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
4. ಸರ್ಕಾರದ ಉಪಕಾರ್ಯದರ್ಶಿ, – ಸದಸ್ಯರು<br>ಆರ್ಥಿಕ ಇಲಾಖೆ (ಸೇವೆಗಳು)
5. ಸರ್ಕಾರದ ಅಧೀನ ಕಾರ್ಯದರ್ಶಿ, – ಸದಸ್ಯರು<br>ಸಿ.ಆ.ಸು.ಇ (ಸೇವಾ ನಿಯಮಗಳು–3)
6. ವ್ಯವಸ್ಥಾಪಕ ನಿರ್ದೇಶಕರು, – ಸದಸ್ಯ ಕಾರ್ಯದರ್ಶಿ<br>ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ

ಸದರಿ ಸಮಿತಿಯು 2 ತಿಂಗಳ ಅವಧಿಯಲ್ಲಿ ಕರಡು ನಿಯಮಗಳನ್ನು ರಚಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನರಸಿಂಹಯ್ಯ**

ಪಿ.ಆರ್. 890 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

### ಸೇರ್ಪಡೆ

**ಸಂಖ್ಯೆ: ಅಪಜೀ 255 ಎಫ್‌ಡಬ್ಲ್ಯುಎಲ್ 2008, ಬೆಂಗಳೂರು, ದಿನಾಂಕ: 2ನೇ ಮಾರ್ಚ್ 2009**

ಮೈಸೂರು ವಿಭಾಗದ ನಂಜನಗೂಡು ತಾಲ್ಲೂಕಿನಲ್ಲಿ ನಾಲ್ಕು ಆನೆಗಳು ಸಾವಿಗೀಡಾಗಿರುವ ಬಗ್ಗೆ ತನಿಖೆ ನಡೆಸುವ ಸಲುವಾಗಿ ತಜ್ಞರನ್ನೊಳಗೊಂಡ ಸಮಿತಿಯನ್ನು ರಚಿಸಿರುವ ಆದೇಶ ಸಂಖ್ಯೆ: ಅಪಜೀ 255 ಎಫ್‌ಡಬ್ಲ್ಯುಎಲ್ 2008 ದಿನಾಂಕ: 22.12.2008ರಲ್ಲಿ II ಆನೆಗಳ ವಾಸ್ತವ ಪ್ರದೇಶ ಹಾಗೂ ಸಂಕುಲಗಳನ್ನು ಗುರುತಿಸುವ ಬಗ್ಗೆ ಇರುವ ತಜ್ಞರ ಸಮಿತಿಯ ಕ್ರಮ ಸಂಖ್ಯೆ: 7ರ ನಂತರ ಈ ಕೆಳಕಂಡ ತಜ್ಞರನ್ನು ಹೆಚ್ಚುವರಿ ಸದಸ್ಯರನ್ನಾಗಿ ನೇಮಿಸಲಾಗಿದೆ.

1. Dr. Ullas Karanth, Director, Centre for Wildlife Studies Bangalore.
2. Sri Sanjay Gubbi, Member, State Board for Wildlife, Tumkur.
3. Dr. M.D. Madhusudan, Nature Conservation Foundation, Bangalore.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**

ಪಿ.ಆರ್. 892 ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀಮತಿ ಸುನಂದಾ ಈಶ್ವರಪ್ಪ ಮಡಿವಾಳರ, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಹಾವೇರಿ ಇವರ ಪರಿವೀಕ್ಷಣಾ ಅವಧಿಯನ್ನು ಘೋಷಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ 03.05.2006.

2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್ / ಸಿಶಾ.1 / 37 (03) / 2008–09, ದಿನಾಂಕ 18.12.2008.

**ಪ್ರಸ್ತಾವನೆ:**

ಶ್ರೀಮತಿ ಸುನಂದಾ ಈಶ್ವರಪ್ಪ ಮಡಿವಾಳರ ಅವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಯಾಗಿದ್ದು, ಮೇಲೆ ಓದಲಾದ (1)ರ ಅಧಿಸೂಚನೆ ದಿನಾಂಕ 03.05.2006ರ ಕ್ರ.ಸಂ. 03ರನ್ವಯ ದಿನಾಂಕ 12.05.2006ರ ಪೂರ್ವಾಹ್ನದಂದು ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸೊರಬ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ದಿನಾಂಕ 11.05.2008ಕ್ಕೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆ. ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನಿಗಧಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ–1 ಪತ್ರಿಕೆ–2ರಲ್ಲಿ ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯಲ್ಲಿ ತೇರ್ಗಡೆ ಹೊಂದಿರುತ್ತಾರೆ. ಇವರು ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ನೀಡಲಾಗಿದೆ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2006–07 ಮತ್ತು 2007–08ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಇಲಾಖಾ ಅವಕೃಪೆಗೆ ಒಳಗಾಗಿರುವುದಿಲ್ಲ. ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಮತ್ತು ಸದ್ಯದ ಪರಿಸ್ಥಿತಿಯಲ್ಲಿ ಹೂಡುವ ಅವಶ್ಯಕತೆಯು ಇರುವುದಿಲ್ಲ.

ಆದುದರಿಂದ ಶ್ರೀಮತಿ ಸುನಂದಾ ಈಶ್ವರಪ್ಪ ಮಡಿವಾಳರ, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹಾವೇರಿ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 12.05.2008ರಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (2)ರ ಪತ್ರ ದಿನಾಂಕ 18.12.2008ರಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ನಂ. ಒಇ 550 ಪಿಪಿಇ 2008, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಶ್ರೀಮತಿ ಸುನಂದಾ ಈಶ್ವರಪ್ಪ ಮಡಿವಾಳರ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹಾವೇರಿ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 12.05.2008ರ ಪೂರ್ವಾಹ್ನದಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಪಿ.ಆರ್. 708

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಶೇಖರಪ್ಪ ಅಕಳಂಡಪ್ಪ, ಹಳೇಮನಿ, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಸಂಕೇಶ್ವರ ಇವರ ಪರಿವೀಕ್ಷಣಾ ಅವಧಿಯನ್ನು ಘೋಷಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ 03.05.2006.

2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್ / ಸಿಶಾ.1 / 37 (04) / 2008–09, ದಿನಾಂಕ 18.12.2008.

**ಪ್ರಸ್ತಾವನೆ:**

ಶ್ರೀ ಶೇಖರಪ್ಪ ಅಕಳಂಡಪ್ಪ ಹಳೇಮನಿ ಅವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಯಾಗಿದ್ದು, ಮೇಲೆ ಓದಲಾದ (1)ರ ಅಧಿಸೂಚನೆ ದಿನಾಂಕ 03.05.2006ರ ಕ್ರ.ಸಂ. 04ರನ್ವಯ ದಿನಾಂಕ 15.05.2006ರ ಪೂರ್ವಾಹ್ನದಂದು ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಜೇವರ್ಗಿ, ಗುಲ್ಬರ್ಗ ಜಿಲ್ಲೆ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ದಿನಾಂಕ 14.05.2008ಕ್ಕೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆ. ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನಿಗಧಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್

ಹೈಯರ್ ಮತ್ತು ಜನರಲ್ ಲಾ ಭಾಗ–1 ಪತ್ರಿಕೆ–2ರಲ್ಲಿ ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯಲ್ಲಿ ತೇರ್ಗಡೆ ಹೊಂದಿರುತ್ತಾರೆ. ಇವರು ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಮಾಧ್ಯಮವನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ನೀಡಲಾಗಿದೆ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2006–07 ಮತ್ತು 2007–08ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಇಲಾಖಾ ಅವಕೃಪೆಗೆ ಒಳಗಾಗಿರುವುದಿಲ್ಲ. ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಮತ್ತು ಸದ್ಯದ ಪರಿಸ್ಥಿತಿಯಲ್ಲಿ ಹೂಡುವ ಅವಶ್ಯಕತೆಯು ಇರುವುದಿಲ್ಲ.

ಆದುದರಿಂದ ಶ್ರೀ ಶೇಖರಪ್ಪ ಅಕಳಂಡಪ್ಪ ಹಳೇಮನಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಂಕೇಶ್ವರ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 15.05.2008ರಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (2)ರ ಪತ್ರ ದಿನಾಂಕ 18.12.2008ರಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ನಂ. ಒಇ 551 ಪಿಪಿಇ 2008, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಶ್ರೀ ಶೇಖರಪ್ಪ ಅಕಳಂಡಪ್ಪ ಹಳೇಮನಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಂಕೇಶ್ವರ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 15.05.2008ರ ಪೂರ್ವಾಹ್ನದಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಪಿ.ಆರ್. 709

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಜೆ.ಎನ್. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು, ಇವರ ವೇತನವನ್ನು ಇವರಿಗಿಂತ ಕಿರಿಯ ಸರ್ಕಾರಿ ಅಧಿಕಾರಿಯಾದ ಶ್ರೀ ಎಂ.ಆರ್. ಬನ್ನಿಹಟ್ಟಿ ಇವರ ವೇತನಕ್ಕೆ ಸಮಾನಗೊಳಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ–II ಸಂ: ಲಾ 161 ಪಿಪಿಇ 86, ದಿನಾಂಕ: 24.07.1989.
2. ಸದರಿ ಅಧಿಕಾರಿಯವರ ಮನವಿ ದಿನಾಂಕ: 23.06.2008.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ ಲೆಕ್ಕ–1/141/2008–09, ದಿನಾಂಕ: 09.09.2008.

**ಪ್ರಸ್ತಾವನೆ:**

ಶ್ರೀ ಜೆ.ಎನ್. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು ಮತ್ತು ಶ್ರೀ ಎಂ.ಆರ್. ಬನ್ನಿಹಟ್ಟಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಬೆಂಗಳೂರು ಇವರುಗಳು ಮೇಲೆ (1)ರಲ್ಲಿ ಓದಲಾದ ದಿನಾಂಕ:24.07.1989ರ ಸರ್ಕಾರದ ಅಧಿಸೂಚನೆಯನ್ವಯ ಕ್ರಮವಾಗಿ ಕ್ರ.ಸಂ:16 ಮತ್ತು ಕ್ರ.ಸಂ:38ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿರುತ್ತಾರೆ.

ಮೇಲೆ ಓದಲಾದ (2)ರ ಮನವಿ ಪತ್ರದಲ್ಲಿ ಶ್ರೀ ಜೆ.ಎನ್. ದೇಸಾಯಿಯವರು ದಿನಾಂಕ: 30.07.2005ರಿಂದ ಸದರಿ ಅಧಿಕಾರಿಯ ವೇತನ ಮತ್ತು ಅವರಿಗಿಂತ ಕಿರಿಯ ಸರ್ಕಾರಿ ಅಧಿಕಾರಿಯಾದ ಶ್ರೀ ಎಂ.ಆರ್. ಬನ್ನಿಹಟ್ಟಿರವರ ವೇತನದ ನಡುವೆ ಒಂದು ಹಂತದ ವ್ಯತ್ಯಾಸ ಉಂಟಾಗಿರುತ್ತದೆ. ಆದ್ದರಿಂದ, ದಿನಾಂಕ: 30.07.2005ರಂದು ಅವರ ವೇತನವನ್ನು ರೂ.17,700–00ಗಳಿಗೆ ನಿಗದಿಗೊಳಿಸಿ, ವಾರ್ಷಿಕ ವೇತನ ಬಡ್ತಿಯ ದಿನಾಂಕವಾದ 01.08.2005ಕ್ಕೆ ರೂ.18,150–00ಗಳಿಗೆ ವೇತನವನ್ನು ನಿಗದಿಪಡಿಸುವಂತೆ ಸದರಿ ಅಧಿಕಾರಿಯು ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರು ಶ್ರೀ ಜೆ.ಎನ್. ದೇಸಾಯಿ ಮತ್ತು ಶ್ರೀ ಎಂ.ಆರ್. ಬನ್ನಿಹಟ್ಟಿರವರುಗಳು ಮೇಲೆ (1)ರಲ್ಲಿ ಓದಲಾದ ಸರ್ಕಾರ

ಅಧಿಸೂಚನೆಯನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿರುತ್ತಾರೆ. ದಿನಾಂಕ:1.1.2007ರಲ್ಲಿದ್ದಂತೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ/ಸಹಾಯಕ ಅಭಿಯೋಗ ನಿರ್ದೇಶಕರ ಜೇಷ್ಠತಾ ಪಟ್ಟಿಯಲ್ಲಿ ಕ್ರಮವಾಗಿ ಕ್ರ.ಸಂ: 71 ಕ್ರ.ಸಂ:77 ಆಗಿರುತ್ತದೆ. ಆದ್ದರಿಂದ, ಶ್ರೀ ಎಂ.ಆರ್. ಬನ್ನಿಹಟ್ಟಿರವರು ಶ್ರೀ ಜೆ.ಎನ್. ದೇಸಾಯಿರವರಿಗಿಂತ ಕಿರಿಯ ಸರ್ಕಾರಿ ಅಧಿಕಾರಿಯಾಗಿರುತ್ತಾರೆ. ಶ್ರೀ ಎಂ.ಆರ್. ಬನ್ನಿಹಟ್ಟಿರವರಿಗೆ ಯಾವುದೇ ಬಡ್ತಿ ಇಲ್ಲದೆ ನಿರಂತರವಾಗಿ 15 ವರ್ಷಗಳ ಸೇವೆ ಸಲ್ಲಿಸಿದ್ದರಿಂದ ಸ್ವಯಂಚಾಲಿತ ವಿಶೇಷ ವೇತನ ಶ್ರೇಣಿಗೆ ಬಡ್ತಿಯು ಸಿಕ್ಕಿ, ನಂತರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಮುಂಬಡ್ತಿ ಸಿಕ್ಕಿರುವುದರಿಂದ, ಹಿರಿಯ ಅಧಿಕಾರಿಯ ವೇತನ ಮತ್ತು ಕಿರಿಯ ಅಧಿಕಾರಿಯ ವೇತನದ ನಡುವೆ ಒಂದು ಹಂತದ ವ್ಯತ್ಯಾಸ ಉಂಟಾಗಿರುತ್ತದೆ. ಕೆ.ಸಿ.ಎಸ್. (ಪರಿಷ್ಕೃತ ವೇತನ) ನಿಯಮಗಳು 2007ರ ನಿಯಮ 7(8)ರ ನಾಲ್ಕು ಷರತ್ತುಗಳನ್ನು ಪೂರೈಸಿದ್ದಲ್ಲಿ, ಹಿರಿಯ ಸರ್ಕಾರಿ ಅಧಿಕಾರಿಯ ವೇತನವನ್ನು ಕಿರಿಯ ಸರ್ಕಾರಿ ನೌಕರರ ವೇತನಕ್ಕೆ ವ್ಯತ್ಯಾಸದ ದಿನಾಂಕದಿಂದ ಸಮಾನಗೊಳಿಸಬಹುದಾಗಿರುತ್ತದೆ.

ಆದ್ದರಿಂದ, ಹಿರಿಯ ಅಧಿಕಾರಿಯಾದ ಶ್ರೀ ಜೆ.ಎನ್. ದೇಸಾಯಿರವರ ವೇತನವನ್ನು ದಿನಾಂಕ: 30.07.2005ರಂದು ರೂ.17,700–00ಕ್ಕೆ ಹೆಚ್ಚಿಸಿ ನಿಗದಿಪಡಿಸಿ, ದಿನಾಂಕ: 01.08.2005ಕ್ಕೆ ರೂ.18,150–00 ಗಳಿಗೆ ನಿಗದಿಪಡಿಸಿ, ಕಿರಿಯ ಸರ್ಕಾರಿ ನೌಕರರಾದ ಶ್ರೀ ಎಂ.ಆರ್. ಬನ್ನಿಹಟ್ಟಿ, ಅವರ ವೇತನದೊಂದಿಗೆ ಸಮಾನಗೊಳಿಸಿ ನಿಗದಿಪಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 407 ಪಿಪಿಇ 2008, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2009**

ಶ್ರೀ ಜೆ.ಎನ್. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು, ಇವರ ವೇತನವನ್ನು ಸರ್ಕಾರಿ ಆದೇಶ ಸಂಖ್ಯೆ: FD 60 SRP 84, ದಿನಾಂಕ: 07.11.1984 ಹಾಗೂ FD 2 SRS 99, ದಿನಾಂಕ: 28.01.1999ರನ್ವಯ, ಶ್ರೀ ಎಂ.ಆರ್. ಬನ್ನಿಹಟ್ಟಿರವರ ವೇತನ ರೂ.18,150–00ಕ್ಕೆ, ದಿನಾಂಕ: 01.08.2005ರಿಂದ ಜಾರಿಗೆ ಬರುವಂತೆ ಸಮಾನಾಂತರಗೊಳಿಸಿದೆ.

ಸದರಿ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ: ಒಸಾಇ 64776 ಆಂಆಸ 2008, ದಿನಾಂಕ: 17.12.2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 720

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು).

**ವಿಷಯ:** ಶ್ರೀ ಸೈಯದ್ ಬಲಿಗೂರ್ ರೆಹಮಾನ್, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಚಿಂತಾಮಣಿ ಇವರ ಪರಿವೀಕ್ಷಣಾ ಅವಧಿಯನ್ನು ಘೋಷಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ 03.05.2006.

2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್ / ಸಿಶಾ.1 / 37 (01) / 2008–09, ದಿನಾಂಕ 18.12.2008.

**ಪ್ರಸ್ತಾವನೆ:**

ಶ್ರೀ ಸೈಯದ್ ಬಲಿಗೂರ್ ರೆಹಮಾನ್ ಅವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಯಾಗಿದ್ದು, ಮೇಲೆ ಓದಲಾದ (1)ರ ಅಧಿಸೂಚನೆ ದಿನಾಂಕ 03.05.2006ರ ಕ್ರ.ಸಂ. 01ರನ್ವಯ ದಿನಾಂಕ 08.05.2006ರ ಪೂರ್ವಾಹ್ನದಂದು ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್ ನ್ಯಾಯಾಲಯ, ಚಿಂತಾಮಣಿ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ದಿನಾಂಕ 07.05.2008ಕ್ಕೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆ. ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನಿಗಧಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ–1 ಪತ್ರಿಕೆ–2ರಲ್ಲಿ ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯಲ್ಲಿ ತೇರ್ಗಡೆ ಹೊಂದಿರುತ್ತಾರೆ. ಇವರು ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಕನ್ನಡವನ್ನು ತೃತೀಯ ಭಾಷೆಯನ್ನಾಗಿ ಪಡೆದುಕೊಂಡು ತೇರ್ಗಡೆ ಹೊಂದಿರುತ್ತಾರೆ ಹಾಗೂ ಕನ್ನಡ ಸಾಹಿತ್ಯ ಪರಿಷತ್ ಅವರು ಏರ್ಪಡಿಸಿದ್ದ ಕನ್ನಡ ಕಾವ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದರಿಂದ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ನೀಡಲಾಗಿದೆ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2006–07 ಮತ್ತು 2007–08ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಇಲಾಖಾ ಅವಕೃಪೆಗೆ ಒಳಗಾಗಿರುವುದಿಲ್ಲ. ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಮತ್ತು ಸದ್ಯದ ಪರಿಸ್ಥಿತಿಯಲ್ಲಿ ಹೂಡುವ ಅವಶ್ಯಕತೆಯು ಇರುವುದಿಲ್ಲ.

ಆದುದರಿಂದ ಶ್ರೀ ಸೈಯದ್ ಬಲಿಗೂರ್ ರೆಹಮಾನ್, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಂತಾಮಣಿ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 08.05.2008ರಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (2)ರ ಪತ್ರ ದಿನಾಂಕ 18.12.2008ರಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ನಂ. ಒಇ 547 ಪಿಪಿಇ 2008, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಶ್ರೀ ಸೈಯದ್ ಬಲಿಗೂರ್ ರೆಹಮಾನ್, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಂತಾಮಣಿ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 08.05.2008ರ ಪೂರ್ವಾಹ್ನದಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಪಿ.ಆರ್. 721

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಬಿ.ಸಿ. ಶಿವಾನಂದಮೂರ್ತಿ, ತಹಶೀಲ್ದಾರ್ ಗ್ರೇಡ್–2, ಪ್ರಸ್ತುತ ತಹಶೀಲ್ದಾರ್, ಕಾರವಾರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ: ಕಂಇ 110 ಎಎಸ್‌ಡಿ 2006, ದಿನಾಂಕ: 22.06.2006.
2. ಶ್ರೀ ಬಿ.ಸಿ. ಶಿವಾನಂದಮೂರ್ತಿ, ತಹಶೀಲ್ದಾರ್ ಇವರ ಮನವಿ ದಿನಾಂಕ: 12.12.2006.

**ಪ್ರಸ್ತಾವನೆ:**

ಶ್ರೀ ಬಿ.ಸಿ. ಶಿವಾನಂದಮೂರ್ತಿ, ತಹಶೀಲ್ದಾರ್, ಇವರು ಮೇಲೆ ಓದಲಾದ ದಿನಾಂಕ: 12.12.2006ರಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ ಸದರಿಯವರು ಹಿಂದೆ ಸರ್ಕಾರಿ ಪ್ರೌಢಶಾಲೆ, ಶಾಪೂರು, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ ಇಲ್ಲಿ ದಿನಾಂಕ: 29.01.2004 ರಿಂದ ದಿನಾಂಕ: 28.06. 2006ರವರೆಗೆ ಸಹ ಶಿಕ್ಷಕರಾಗಿ ಸೇವೆ ಸಲ್ಲಿಸಿರುವುದರಿಂದ ಇವರ ಹಿಂದಿನ ಸೇವೆಯನ್ನು ನಿವೃತ್ತಿ ವೇತನದ ಸೌಲಭ್ಯಕ್ಕಾಗಿ ಪರಿಗಣಿಸುವಂತೆ ಕೋರಿರುತ್ತಾರೆ.

ಸದರಿ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀಯುತರ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಶ್ರೀಯುತರು ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ಸಲ್ಲಿಸಿದ್ದ ದಿನಾಂಕ: 29.01.2004 ರಿಂದ 28.06.2006ರ: ವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224–ಎ ರೀತ್ಯ ನಿವೃತ್ತ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 13 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀ ಬಿ.ಸಿ. ಶಿವಾನಂದಮೂರ್ತಿ, ತಹಶೀಲ್ದಾರ್, ಕಾರವಾರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ, ಇವರು ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ದಿನಾಂಕ: 29.01.2004 ರಿಂದ ದಿನಾಂಕ: 28.06.2006 ರವರೆವಿಗೆ ಸಲ್ಲಿಸಲಾಗಿದ್ದ ಸೇವೆಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224–ಎ ರೀತ್ಯ ಅವರ ಪ್ರಸ್ತುತ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7) ರವರ ಟಿಪ್ಪಣಿ ಸಂ: ಆಇ 17 ವೆಚ್ಚ–7/2008, ದಿನಾಂಕ: 13.2.2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 981

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಎಸ್. ಯೋಗೇಶ್ವರ್, ತಹಶೀಲ್ದಾರ್ ಗ್ರೇಡ್–2, ಪ್ರಸ್ತುತ ತಹಶೀಲ್ದಾರ್, ಶೃಂಗೇರಿ ತಾಲ್ಲೂಕು ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಕಂಇ 241 ಎಎಸ್‌ಡಿ 2005, ದಿನಾಂಕ: 25.01.2006.

2. ಶ್ರೀ ಎಸ್. ಯೋಗೇಶ್ವರ್ ಇವರ ಮನವಿ ದಿನಾಂಕ: 07.03.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ:(1), ದಿನಾಂಕ: 25.01.2006ರ ಅಧಿಸೂಚನೆಯಲ್ಲಿ, ಶ್ರೀ ಎಸ್. ಯೋಗೇಶ್ವರ್ ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಸದರಿಯವರು ಈ ಹುದ್ದೆಗೆ, ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ, ಸಮಾಜ ಶಾಸ್ತ್ರ ಉಪನ್ಯಾಸಕರಾಗಿ, ಶ್ರೀ ಕೊಲ್ಲಿ ನಾಗೇಶ್ವರರಾವ್ ಲಿಂಗಯ್ಯ, ಸರ್ಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯ, ಗಂಗಾವತಿ, ಕೊಪ್ಪಳ ಜಿಲ್ಲೆ ಇಲ್ಲಿ ದಿನಾಂಕ: 12.07.2003 ರಿಂದ 02.02.2006ರವರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿರುತ್ತಾರೆ. ಸದರಿಯವರು ಕಾಲೇಜು ಶಿಕ್ಷಣ ಇಲಾಖೆ ಆಯುಕ್ತರ ಆದೇಶ ಸಂ: ಕಂಇ/5/ಸೇಮು/2006/ಸಿವಿ–2, ಬೆಂಗಳೂರು ಇವರ ದಿನಾಂಕ: 02.02.2006 ರನ್ವಯ ಉಪನ್ಯಾಸಕರ ಹುದ್ದೆಯಿಂದ ಬಿಡುಗಡೆ ಹೊಂದಿರುತ್ತಾರೆ/. ಆದ್ದರಿಂದ ಶ್ರೀಯುತರು ಶಿಕ್ಷಣ ಇಲಾಖೆಯಲ್ಲಿ ದಿನಾಂಕ: 12.07.2003 ರಿಂದ 02.02.2006ರವರೆಗೆ ಸೇವಾ ಅವಧಿಯನ್ನು ಪೂರೈಸಿದ್ದು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಶ್ರೀ ಎಸ್. ಯೋಗೇಶ್ವರ್, ತಹಶೀಲ್ದಾರ್ ಇವರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀಯುತರ ಮೂಲ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಇವರು ಈ ಹಿಂದೆ ಶಿಕ್ಷಣ ಇಲಾಖೆಯಲ್ಲಿ, ಸಮಾಜ ಶಾಸ್ತ್ರ ಉಪನ್ಯಾಸಕರಾಗಿ ಸಲ್ಲಿಸಿದ್ದ ಸೇವೆ ದಿನಾಂಕ: 12.07.2003 ರಿಂದ 02.02.2006ರವರೆಗೆ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ಹುದ್ದೆಯ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಹಾಗೂ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 41–ಎ ರ ಪ್ರಕಾರ ವೇತನ ನಿಗದಿಪಡಿಸಲು, ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಆರ್‌ಡಿ 247 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಎಸ್.ಯೋಗೇಶ್ವರ್ ತಹಶೀಲ್ದಾರ್, ಶೃಂಗೇರಿ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ ಸಮಾಜ ಶಾಸ್ತ್ರ ಉಪನ್ಯಾಸಕರಾಗಿ ದಿನಾಂಕ: 12.07.2003 ರಿಂದ 02.02.2006ರವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಶ್ರೀ ಎಸ್. ಯೋಗೇಶ್ವರ್ ಇವರು ಈ ಹಿಂದೆ, ಉಪನ್ಯಾಸಕರು, (ಸಮಾಜ ಶಾಸ್ತ್ರ) ರವರು ರಾಜ್ಯ ವೇತನ ಶ್ರೇಣಿಯಲ್ಲಿ ಹೊಂದಿರಬಹುದಾಗಿದ್ದ ವೇತನ ಶ್ರೇಣಿ ಮತ್ತು ಪುಸ್ತಕದಲ್ಲಿನ ತಹಶೀಲ್ದಾರರಾಗಿ ನೇಮಕ ಹೊಂದಿರುವ ಹುದ್ದೆಯ ವೇತನ ಶ್ರೇಣಿಗಳು ಸಮಾನ ವೇತನ ಶ್ರೇಣಿಗಳಾಗಿದ್ದು, ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 41–ಎ(ii) ರ ಉಪಬಂಧಗಳಂತೆ ದಿನಾಂಕ: 03.02.2006 ರಂದು ಶ್ರೀಯುತರ ವೇತನದ ಹಂತ ರೂ.6,300/– ಪಡೆಯಬಹುದಾಗಿದ್ದು, ಈ ಹಿನ್ನೆಲೆಯಲ್ಲಿ, ದಿನಾಂಕ: 03.02.2006ರಂದು ತಹಶೀಲ್ದಾರ್ ಹುದ್ದೆಯಲ್ಲಿನ ಇವರ ವೇತನವನ್ನು ವೇತನ ಶ್ರೇಣಿ ರೂ.6,000–11,200 ರಲ್ಲಿ ವೇತನದ ಹಂತ ರೂ.6,300/– ರಲ್ಲಿ ವೇತನ ನಿಗದಿಗೊಳಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7) ರವರ ಟಿಪ್ಪಣಿ ಸಂ: ಆಇ 1404 ವೆಚ್ಚ–7/2008, ದಿನಾಂಕ: 16.01.2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 982

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಅಜೀಜ.ಆರ್.ದೇಸಾಯಿ, ತಹಶೀಲ್ದಾರ್, ಗ್ರೇಡ್–2, ಪ್ರಸ್ತುತ ತಹಶೀಲ್ದಾರ್, ಹಳಿಯಾಳ ತಾಲ್ಲೂಕು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಕಂಇ 110 ಎಎಸ್‌ಡಿ 2006, ದಿನಾಂಕ: 22.06.2006.

2. ಶ್ರೀ ಅಜೀಜ.ಆರ್.ದೇಸಾಯಿ ತಹಶೀಲ್ದಾರ್ ಇವರ ಮನವಿ ದಿನಾಂಕ: 01.08.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ:(1), ದಿನಾಂಕ: 22.06.2006ರ ಅಧಿಸೂಚನೆಯಲ್ಲಿ, ಶ್ರೀ ಅಜೀಜ.ಆರ್.ದೇಸಾಯಿ ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಸದರಿಯವರು ಈ ಹುದ್ದೆಗೆ, ಸೇರುವ ಪೂರ್ವದಲ್ಲಿ ಪೊಲೀಸ್ ಇಲಾಖೆಯಲ್ಲಿ, ಆರಕ್ಷಕ ಉಪನಿರೀಕ್ಷಕರಾಗಿ (ಬೆರಳಚ್ಚು ಮುದ್ರೆ ಘಟಕ) ದಿನಾಂಕ: 01.07.2002 ರಿಂದ 01.07.2006ರವರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿ ಮೇಲೆ ಓದಲಾದ ಕ್ರ.ಸಂ: 2 ರ ಪ್ರಸ್ತಾವನೆಯಲ್ಲಿ ಶ್ರೀಯುತರು ಕಂದಾಯ ಇಲಾಖೆಯಲ್ಲಿ ಸೇವೆ ಪ್ರಾರಂಭಿಸುವ ಪೂರ್ವದಲ್ಲಿ ಡಿ.ಜಿ. ಮತ್ತು ಐ.ಜಿ.ಪಿ, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಆದೇಶ ಸಂ: 9/ಆರ್‌ಇಸಿಟಿ/2000–2001, ದಿನಾಂಕ: 24.06.2002 ರಂತೆ ಆರಕ್ಷಕ ಉಪನಿರೀಕ್ಷಕ (ಬೆರಳಚ್ಚು ಮುದ್ರೆ ಘಟಕ) ರಾಗಿ ಮೈಸೂರು ಜಿಲ್ಲೆಯಲ್ಲಿ, ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ತದನಂತರ ದಿನಾಂಕ: 29.06.2006 ರಂದು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಇವರ ಪತ್ರ ಸಂ: 26/ಸಿಬ್ಬಂದಿ(1)/2006–07ರನ್ವಯ ಪೊಲೀಸ್ ಇಲಾಖೆಯಿಂದ ದಿನಾಂಕ: 01.07.2006ರಂದು ಬಿಡುಗಡೆ ಹೊಂದಿರುತ್ತಾರೆ. ಆದ್ದರಿಂದ ಶ್ರೀಯುತರು ಪೊಲೀಸ್ ಇಲಾಖೆಯಲ್ಲಿ ದಿನಾಂಕ: 01.07.2002 ರಿಂದ 01.07.2006ರವರೆಗಿನ ಸೇವಾ ಅವಧಿಯನ್ನು ಪೂರೈಸಿದ್ದು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಶ್ರೀ ಅಜೀಜ.ಆರ್.ದೇಸಾಯಿ ತಹಶೀಲ್ದಾರ್ ಇವರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀಯುತರ ಮೂಲ ಸೇವೆ ಪುಸ್ತಕದಲ್ಲಿ ದಾಖಲಿಸಿರುವಂತೆ ಶ್ರೀ ಅಜೀಜ.ಆರ್.ದೇಸಾಯಿ ತಹಶೀಲ್ದಾರ್, ಹಳಿಯಾಳ ತಾಲ್ಲೂಕು, ಉತ್ತರಕನ್ನಡ ಜಿಲ್ಲೆ ಇವರ ಈ ಹಿಂದೆ ಪೊಲೀಸ್ ಇಲಾಖೆಯಲ್ಲಿ, ಆರಕ್ಷಕ ಉಪನಿರೀಕ್ಷಕ (ಸಿವಿಲ್)ರಾಗಿ ಸಲ್ಲಿಸಿದ್ದ ಸೇವೆ ದಿನಾಂಕ: 01.07.2002 ರಿಂದ 01.07.2006ರವರೆಗಿನ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 69 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಅಜೀಜ.ಆರ್.ದೇಸಾಯಿ ತಹಶೀಲ್ದಾರ್, ಹಳಿಯಾಳ ತಾಲ್ಲೂಕು, ಉತ್ತರಕನ್ನಡ ಜಿಲ್ಲೆ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಪೊಲೀಸ್ ಇಲಾಖೆಯಲ್ಲಿ ಆರಕ್ಷಕ ಉಪನಿರೀಕ್ಷಕ (ಸಿವಿಲ್) ದಿನಾಂಕ: 01.07.2002 ರಿಂದ 01.07.2006ರವರೆಗಿನ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಅವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7) ರವರ ಟಿಪ್ಪಣಿ ಸಂ: ಆಇ 1427 ವೆಚ್ಚ–7/2008, ದಿನಾಂಕ: 26.12.2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 983

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

## ಇಂಧನ ಸಚಿವಾಲಯ

**ವಿಷಯ:** ಮೆ:: ತುಂಗಭದ್ರಾ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್‌ಗೆ 18.00 ಮೆಗಾ ವ್ಯಾಟ್ ಸಾಮರ್ಥ್ಯದ ಸಿಂಗತಲೂರ್ ಹುಲಿಗಡ್ಡ ಕಿರು ಜಲ ವಿದ್ಯುತ್ ಯೋಜನೆ ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಡಿಇ 87 ಎನ್‌ಸಿಇ 1999 ದಿನಾಂಕ: 23.10.2001.
2. ಸರ್ಕಾರಿ ಆದೇಶ ಸಂಖ್ಯೆ : ಇಂಇ 182 ಎನ್‌ಸಿಇ 2003 ದಿನಾಂಕ: 25.08.2003 ಮತ್ತು ತಿದ್ದುಪಡಿ ದಿನಾಂಕ: 11.2.2004.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 390 ಎನ್‌ಸಿಇ 2007 ದಿನಾಂಕ: 14.11.2007.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ತುಂಗಭದ್ರಾ/09/218 ದಿನಾಂಕ: 24/27.1.2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಮೆ:: ತುಂಗಭದ್ರಾ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಹಮ್ಮಿಗೆ ಗ್ರಾಮದ ಹತ್ತಿರ 7.00 ಮೆಗಾವ್ಯಾಟ್ ಸಾಮರ್ಥ್ಯದ ಸಿಂಗತಲೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 7.00 ಮೆಗಾ ವ್ಯಾಟ್‌ನಿಂದ 18.00 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ ಹಾಗೂ ಹೊಸಪೇಟೆ ತಾಲ್ಲೂಕು ಹಮ್ಮಿಗೆ ಗ್ರಾಮದ ಬದಲಾಗಿ ಹಡಗಲಿ ತಾಲ್ಲೂಕು ತಿಮ್ಮಲಾಪುರ ಗ್ರಾಮ ಎಂದು ತಿದ್ದುಪಡಿ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 14.11.2007 ರ ಸರ್ಕಾರಿ ಆದೇಶದಲ್ಲಿ ಸದರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಸದರಿ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ ಒಂದು ವರ್ಷದ ಅವಧಿಗೆ ವಿಸ್ತರಿಸಲಾಗಿದೆ.

ಸಿಂಗತಲೂರ್ ಬ್ಯಾರೇಜಿನ ಕಾಮಗಾರಿಯನ್ನು ಕರ್ನಾಟಕ ನೀರಾವರಿ ನಿಗಮ ನಿಯಮಿತವು ಪೂರ್ಣಗೊಳಿಸದಿರುವ ಹಿನ್ನೆಲೆಯಲ್ಲಿ, ಯೋಜನೆಯನ್ನು ನಿಗಧಿತ ಅವಧಿಯಲ್ಲಿ ಪ್ರಾರಂಭಿಸಲು ಸಾಧ್ಯವಾಗಿರುವುದಿಲ್ಲವೆಂದು ಅಭಿವೃದ್ಧಿದಾರರು ತಿಳಿಸಿ, ಬ್ಯಾರೇಜು ಕಾಮಗಾರಿಯು ಪೂರ್ಣವಾಗುವವರೆಗೆ ಕಾಲಾವಕಾಶವನ್ನು ವಿಸ್ತರಿಸುವಂತೆ ಕೋರಿರುತ್ತಾರೆಂದು ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್ ರವರು ವರದಿ ಮಾಡುತ್ತಾ ಕರ್ನಾಟಕ ನೀರಾವರಿ ನಿಗಮ ನಿಯಮಿತವು ಸಿಂಗತಲೂರ್ ಬ್ಯಾರೇಜಿನ ಕಾಮಗಾರಿಯನ್ನು ಪೂರ್ಣಗೊಳಿಸಿದ 6 ತಿಂಗಳುಗಳೊಳಗಾಗಿ ಸದರಿ ಯೋಜನೆಯನ್ನು ಅನುಷ್ಠಾನ ಮಾಡತಕ್ಕದೆಂಬ ನಿಬಂಧನೆಗೊಳಪಡಿಸಿ ಅಭಿವೃದ್ಧಿದಾರರ ಕಾಲಾವಧಿ ವಿಸ್ತರಣೆ ಕೋರಿಕೆಯನ್ನು ಪರಿಗಣಿಸಬಹುದಾಗಿದೆ ಎಂದು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 71 ಎನ್‌ಸಿಇ 2009, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2009**

ಮೆ:: ತುಂಗಭದ್ರಾ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್‌ಗೆ ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕು ತಿಮ್ಮಲಾಪುರ ಗ್ರಾಮದ ಹತ್ತಿರ 18.00 ಮೆಗಾ ವ್ಯಾಟ್ ಸಾಮರ್ಥ್ಯದ ಸಿಂಗತಲೂರ್ ಕಿರು ಜಲ ವಿದ್ಯುತ್ ಯೋಜನೆಯನ್ನು, ಕರ್ನಾಟಕ ನೀರಾವರಿ ನಿಗಮ ನಿಯಮಿತವು ಸಿಂಗತಲೂರ್ ಬ್ಯಾರೇಜಿನ ಕಾಮಗಾರಿಯನ್ನು ಪೂರ್ಣಗೊಳಿಸಿದ 6 ತಿಂಗಳುಗಳೊಳಗಾಗಿ ಅನುಷ್ಠಾನ ಮಾಡತಕ್ಕದ್ದೆಂಬ ನಿಬಂಧನೆಗೊಳಪಡಿಸಿ ಅನುಷ್ಠಾನದ ಕಾಲಾವಧಿಯನ್ನು ದಿನಾಂಕ: 14.11.2008 ರಿಂದ ವಿಸ್ತರಿಸಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 984

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ENERGY SECRETARIAT

**Sub:** Transfer of 5.00 MW Wind Power Capacity in favour of M/s JHP Wind Power Private Limited-reg.

**Read:**
1. Government Order No: EN 23 NCE 2006 dated: 8.5.2006.
2. Letter No: KRED/08/JHPWPPL/2008/1576 dated 25.7.2008/26.9.2008 received from the Managing Director, Karnataka Renewable Energy Development Limited, Bangalore.
3. Letter No: JHPPPPL/PS-GOK/CAP-TRANSFER/12-09 dated: 12.12.2008.
4. Government Letter No: EN 331 NCE 2008 dated: 2.2.2009.
5. Letter No: KRED/08/JHP/2009/1018 dated; 26.2.2009.

**Preamble:**

In the Government order read at (1) above, sanction has been accorded for implementation of 30.00 MW capacity Wind Power Project at Shimoga and Davangere Districts to M/s J.H. Patel Power Projects (P) Limited.

The Managing Director, Karnataka Renewable Energy Development Limited, Bangalore in his letter read at (2) above has recommended to the Government for transfer of 5.00 MW Wind Power capacity in favour of M/s JHP Wind Power Private Limited at Shivanagar, Kerebilchi, Arasanghatta, Shanti

Sagar (Sulekere Area) of Chennagiri Taluk, Davangere District from M/s J.H. Patel Power Projects (P) Limited.

M/s J.H. Patel Power Projects (P) Limited in their letter read at (3) above has stated that as per the requirement of their project execution plan, they are planning to commission 5.00 MW capacity wind power project by the end of September 2009.

In the letter read at (4) above, M.D., KREDL has been requested to do a spot inspection and report on the status. The Managing Director, KREDL in his letter read at (5) above has reported that the site inspection has undertaken on 21.2.2009 by the KREDL officer, the inspection report confirms that there are no physical activities other than the construction of the approach road to an extent of 1.6 Km. The firm has done the Micro-siting, Contour Survey and applied to forest department for obtaining permission installation Wind Mast. The vegetation at site appears to be thick forest cover.

The proposal has been examined in detail and the following orders issued:-

**Government Order No: EN 331 NCE 2008, Bangalore, Dated: 21st March 2009**

Government accords approval for transfer of 5.00 MW Wind Power capacity in favour of M/s JHP Wind Power Private Limited from M/s J.H. Patel Power Projects (P) Limited subject to the condition that the company will commission the project by the end of September 2009 and supply the power to the KPTCL Grid.

The detailed schedule is as below:-

| **Near by villages of the proposed area and district** | **Geographical area description of the project** |
|---|---|
| Shivanagar, Kerebilichi, Arasanaghatta Shanti Sagar (Sulekere Area) in Chennagiri Taluk, Davangere District | The proposed area consists of two independent contiguous NW-SE oriented ridges are located on the North and South of Shivanagar and Basavarajapura. It has three peaks and is in a open mixed jungle and some portion of it is described as open scrub. The proposed area is covered in the following Geographical co-ordinates:<br>**Latitude:** 14°6'16"-14°9'0"N<br>**Longitude:** 75°50'57"-75°53'10"E<br>**Ridge peaks:** 811, 767, 816m Amsl |

The terms and conditions of the Government Order read at (1) above shall **IPSO FACTO** applicable.

By Order and in the name of Governor of Karnataka,

P.R. 985

**S.J. SAMPATH KUMAR**

Under Secretary to Government, Energy Department.

**Sub:** Transfer of 82.4 MW Wind Power Capacity in favour of M/s CLP Wind Farms (India) Pvt Ltd-reg.

**Read:**
1. Government Order No: EN 198 NCE 2005 dated: 18.8.2005.
2. Government Order No: EN 60 NCE 2006 dated: 10.2.2006.
3. Government Order No: EN 398 NCE 2005 dated: 20.4.2006.
4. Government Order No: EN 69 NCE 2008 dated: 15.2.2008.
5. Letters No: KRED/08/CLPWF/2009/839 dated: 11/12.2.2009 and Letter No: KRED/08/CLP-AIL/2009/1123 dated: 4/5.3.2009 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above allotment has been made for implementation of 102.4 MW wind power project in various places of Belgaum District to M/s Enercon India Limited.

In the Government Order read at (2) above the capacity of the wind power project was enhanced from 102.4 MW to 192 MW.

In the Government Order read at (3) above allotment has been made for implementation of 236.81 MW wind power project at Belgaum and Gadag Districts to M/s Enercon (India) Limited.

In the Government Order read at (4) above 82.4 MW wind power project has been transfered to M/s Gujarat Paguthan Energy Corporation Pvt. Ltd. from out of sanctioned 428.81 MW of M/s Enercon India Limited.

Now, the Managing Director, Karnataka Renewable Energy Development Limited, Bangalore in his letters read at (5) above has stated that M/s CLP Wind Farms (India) Pvt. Ltd.. have programmed to commission the project by June 2009 and supply the power to the State Grid. Therefore, he has recommended to the Government for transfer of 82.4 MW Wind Power capacity of M/s Gujarat Paguthan Energy Corporation Pvt. Ltd. in favour of M/s CLP Wind Farms (India) Pvt. Ltd.

The proposal has been examined at the Government level and hence the following order:-

**Government Order No: EN 65 NCE 2009, Bangalore, Dated: 13th March 2009**

Government accords approval for transfer of 82.4 MW Wind Power project in favour of M/s CLP Wind Farms (India) Pvt. Ltd. from M/s Gujarat Paguthan Energy Corporation Pvt. Ltd. subject to condition that company will commission the project by June 2009 and supply the entire power to the State Grid.

The detailed schedule is as below:

| | | |
|---|---|---|
| Government Order No. EN 60 NCE 2006 dated: 10.2.2006. | 23.2 MW | A large plain area in 'U' shape designated as 'P' and is located on N-E of Saundatti and surrounded by Goravankolla, Katamalli, and Huli villages of Belgaum District. This plateau has rocky knobs and scattered eucalyptus plants. The proposed area is covered in the following Geographical co-ordinates:<br>**Latitude:** 15°8'11"-15°10'41"N<br>**Longitude:** 75°47'32"-75°48'52" E<br>**Peaks:** 751, 756, 784m Amsl. |
| | 40.00 MW | A large NE-SW oriented ridge identified, as 'Q' is located on the East of Manoli town. This potential area is surrounded by Mallapur, Basidoni and Gorobal villages of Belgaum District. The area is situated in its reserved forest and the external features are open scrub. The proposed area is covered in the following Geographical co-ordinates:<br>**Latitude:** 15°10'53"-15°14'47" N<br>**Longitude:** 75°49'52"-75°53'23" E<br>**Peaks:** 744, 729, 750m Amsl. |
| Government Order No: EN 398 NCE 2005 dated: 20.4.2006 | 19.2 MW | The identified plateau is on the bank of Malaprabha Reservoir and is located on the North of Goravankolla village and it is a open scrub. This plateau has two peaks. The area is held in the following Geographical co-ordinates:<br>**Latitude:** 15°47'46" – 15°49'31" N<br>**Longitude:** 75°6'5"-75°8'29" E<br>**Ridge peaks:** 707, 696m Amsl |
| **Total** | **82.4 MW** | |

All the allotments, documents and approvals such as PPA, Assignments, Agreements etc. pertaining to the above Wind Power Project in the name of M/s Gujarat Paguthan Energy Corporation Pvt. Ltd. stands tansferred in the name of M/s CLP Wind Farms (India) Pvt. Ltd. with immediate effect.

The terms and conditions of the Government Order read at (1) and (3) above shall **IPSO FACTO** applicable.

By Order and in the name of Governor of Karnataka,

P.R. 986

**PARVATHY KESHAVACHAR**

Deputy Secretary to Government, Energy Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀಮತಿ ಎಂ. ವಿಜಯಕುಮಾರಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೈಕಂಪಾಡಿ, ಮಂಗಳೂರು ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** Public Prosecutor, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 25.11.08 ರ ಪತ್ರ ಸಂಖ್ಯೆ: Compt / Uplok / Mys-593 / 2008/PP

**ಪ್ರಸ್ತಾವನೆ:**

ಪಬ್ಲಿಕ್ ಪ್ರಾಸಿಕ್ಯೂಟರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ, ಶ್ರೀಮತಿ ಎಂ. ವಿಜಯಕುಮಾರಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರು ಈ ಹಿಂದೆ ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೈಕಂಪಾಡಿ, ಮಂಗಳೂರು ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, Mangalore Special Economic Zone ಯೋಜನೆಗಾಗಿ ಭೂ ಸ್ವಾಧೀನಪಡಿಸಿಕೊಳ್ಳುವಾಗ, ಸದರಿ ಭೂ ಸ್ವಾಧೀನಪಡಿಸಿಕೊಳ್ಳಲಾಗುವ ಭೂಮಿಯ ಖಾಲಿ (vacant), ಇಲ್ಲದಿದ್ದರೂ ಖಾಲಿ ಇದೆ ಎಂದು, ನಿರಂತರವಾಗಿ ಖಾಲಿ ಇದೆ ಎಂದು ಹಾಗೂ ಸಾರ್ವಜನಿಕ ಸಂಪರ್ಕ ರಸ್ತೆ ಇದ್ದರೂ ಸಾರ್ವಜನಿಕ ಸಂಪರ್ಕ ರಸ್ತೆ ಇಲ್ಲವೆಂದು ಸುಳ್ಳು ಪ್ರಮಾಣ ಪತ್ರ ನೀಡಿರುವ ಸಂಬಂಧವಾಗಿ, ಇವರ ವಿರುದ್ಧ ಶ್ರೀ ಕಟೀಲ್ ದಿನೇಶ್ ಪೈ, ಮಂಗಳೂರು ಇವರು ಕರ್ನಾಟಕ ಲೋಕಾಯುಕ್ತಕ್ಕೆ ದಿನಾಂಕ: 28.05.08 ರಂದು ಸಲ್ಲಿಸಿದ ದೂರು ಅರ್ಜಿಯ ಬಗ್ಗೆ ಸನ್ಮಾನ್ಯ ಉಪ ಲೋಕಾಯುಕ್ತರು ನಿಯಮಾನುಸಾರ ತನಿಖೆ ನಡೆಸಿ, ಕರ್ನಾಟಕ ಲೋಕಾಯುಕ್ತ ಕಾಯ್ದೆಯ ನಿಯಮ 12(3) ರಡಿ ಸಲ್ಲಿಸಿದ ವರದಿಯನ್ನು ಲಗತ್ತಿಸಿರುತ್ತಾರೆ.

ಸನ್ಮಾನ್ಯ ಉಪಲೋಕಾಯುಕ್ತರ ತನಿಖಾ ವರದಿಯಲ್ಲಿ, ಸದರಿ ದೂರು ಅರ್ಜಿಯಲ್ಲಿನ ಶ್ರೀಮತಿ ಎಂ. ವಿಜಯಕುಮಾರಿ ರವರ ವಿರುದ್ಧದ ದುರ್ನಡತೆ ಆರೋಪವು, ಕಠಿಣ ದಂಡನೆ ವಿಧಿಸಲು ಅನುಸರಿಸಲಾಗುವ ಕ್ರಮದಂತೆ ಇವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಹಾಗೂ ಈ ಶಿಸ್ತು ಕ್ರಮದ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 14–ಎ ರನ್ವಯ ಉಪಲೋಕಾಯುಕ್ತರಿಗೆ ವಹಿಸುವಂತೆ ಮಾಡಲಾಗಿರುವ ಶಿಫಾರಸನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 075 ಕೆಇವಿ 08, ಬೆಂಗಳೂರು, ದಿನಾಂಕ: 21ನೇ ಮಾರ್ಚ್, 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 14–ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀಮತಿ ಎಂ. ವಿಜಯಕುಮಾರಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೈಕಂಪಾಡಿ, ಮಂಗಳೂರು ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಹಾಗೂ ಪ್ರಸ್ತುತ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಉಡುಪಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇವರ ವಿರುದ್ಧ ಪ್ರಸ್ತಾವನೆಯಲ್ಲಿ ಹೇಳಲಾದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ವಿಚಾರಣೆಯನ್ನು ನಡೆಸಲು ಪ್ರಕರಣವನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 987

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

**ವಿಷಯ:** ಶ್ರೀ ಈ.ರಾಧಾಕೃಷ್ಣ, ಕೆ.ಎ.ಎಸ್ (ಅ.ಶ್ರೇ) ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂ: ಸಿಆಸುಇ 62 ಎಸ್ಇಎನ್ 06 ದಿ:17.04.07.
2. ಶ್ರೀ ಈ. ರಾಧಾಕ್ರಿಷ್ಣ, ಕೆ.ಎ.ಎಸ್. ಅಧಿಕಾರಿ ರವರ ಮನವಿ ದಿ: 19.06.07.
3. ಸರ್ಕಾರ ಆದೇಶ ಸಂ:ಸಿಆಸುಇ 62 ಎಸ್ಇಎನ್ 06 ದಿ:28.09.2007.
4. ಶ್ರೀ ಬಿ.ರಂಗಸ್ವಾಮಿ ನಿವೃತ್ತ ಜಿಲ್ಲಾ ಸೆಷನ್ಸ್ ನ್ಯಾಯಾಧೀಸರು ಇವರ ವಿಚಾರಣಾ ವರದಿ ದಿನಾಂಕ: 26.03.08.
5. 2ನೇ ಕಾರಣ ಕೆಳುವ ನೋಟೀಸ್ ಸಂ: ಸಿಆಸುಇ 62 ಎಸ್ಇಎನ್ 06 ದಿ: 19.04.08.
6. ಶ್ರೀ ಈ. ರಾಧಾಕ್ರಿಷ್ಣ, ಕೆ.ಎ.ಎಸ್ ಅಧಿಕಾರಿ ರವರ ಲಿಖಿತ ಉತ್ತರ ದಿ:22.05.08.
7. ಅ.ಟಿ. ಸಂ: ಸಿಆಸುಇ 194 ಕೆಇವಿ 07 ದಿ: 13.06.08.
8. ಲೋ.ಇ ಯ ಅ.ಟಿ. ಸಂ: ಲೋಇ 190 ಪಿಪಿಎಂ 08 ದಿ:13.10.08.

**ಪ್ರಸ್ತಾವನೆ:**

ಶ್ರೀ ಈ. ರಾಧಾಕೃಷ್ಣ, ಕೆ.ಎ.ಎಸ್. (ಅ.ಶ್ರೇ) ಅಧಿಕಾರಿ ಇವರಿಗೆ ಬೆಂಗಳೂರಿನ ರಾಷ್ಟ್ರೀಯ ಕ್ರೀಡಾ ವಸತಿ ಗ್ರಾಮ ಕೋರಮಂಗಲ ಬೆಂಗಳೂರು ಇಲ್ಲಿ 12 ತಿಂಗಳ ಅವಧಿಗೆ ಸರ್ಕಾರಿ ವಸತಿ ಗೃಹ ಹಂಚಿಕೆಯಾಗಿದ್ದು ಅವರು ತಿಂಗಳು ಪೂರ್ಣಗೊಂಡ ನಂತರವೂ ಅನುಮತಿ ಪಡೆಯದೇ ಸದರಿ ವಸತಿ ಗೃಹದಲ್ಲಿ ಮುಂದುವರೆದಿರುವ ಹಾಗೂ ದಿ:25.08.2000 ರಂದು ಗುಲ್ಬರ್ಗಾದ ಕೆ.ಎಸ್.ಆರ್.ಟಿ.ಸಿ. ಮ್ಯಾನೇಜಿಂಗ್ ಡೈರೆಕ್ಟರ್ ಆಗಿ ವರ್ಗಾವಣೆ ಹೊಂದಿದ್ದರಿಂದ ವಸತಿ ಗೃಹ ಹಂಚಿಕೆ ನಿಯಮ 10ಸಿ ಅನುಸಾರ ಇವರ ಹಂಚಿಕೆ ರದ್ದಾಗಿದ್ದರೂ ಸಹ ಅವರು ಸದರಿ ವಸತಿ ಗೃಹವನ್ನು ಖಾಲಿ ಮಾಡದೇ ಇರುವ ಆರೋಪದ ಸಂಬಂಧ ಮೇಲೆ ಓದಲಾದ ಕ್ರಮ ಸಂ(1)ರಲ್ಲಿ ಸದರಿ ಅಧಿಕಾರಿಗೆ ಸಿಸಿಎ ನಿಯಮಾವಳಿಗಳ ನಿಯಮ (11)ರಡಿ ನೋಟೀಸಿನೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಅದರಂತೆ ಮೇಲೆ ಓದಲಾದ ಕ್ರಮ ಸಂ(2)ರಲ್ಲಿ ಆಪಾದಿತ ಅಧಿಕಾರಿಯು ನೋಟೀಸ್‌ಗೆ ಲಿಖಿತ ಉತ್ತರ ಸಲ್ಲಿಸಲು 1 ತಿಂಗಳ ಕಾಲಾವಕಾಶ ನೀಡುವಂತೆ ಕೋರಿರುತ್ತಾರೆ. ನಿಗದಿತ ಅವಧಿ ಮುಕ್ತಾಯಗೊಂಡಿದ್ದರೂ ಅವರಿಂದ ಯಾವುದೇ ಉತ್ತರ ಬಾರದ ಕಾರಣ ಸದರಿ ಅಧಿಕಾರಿಯ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಮೇಲೆ ಕ್ರಮ ಸಂ(3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಬಿ.ರಂಗಸ್ವಾಮಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಆದುದರಿಂದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ (4)ರಲ್ಲಿ ಸರ್ಕಾರಕ್ಕೆ ವರದಿಯನ್ನು ನೀಡಿ ಸದರಿ ಅಧಿಕಾರಿಯ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಾಗಿ ವರದಿ ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂ(5)ರಲ್ಲಿನ ಕಾರಣ ಕೇಳುವ ನೋಟೀಸ್‌ನೊಂದಿಗೆ ವಿಚಾರಣಾ ವರದಿಯ ಪ್ರತಿಯನ್ನು ಆಪಾದಿತ ಅಧಿಕಾರಿಗೆ ಒದಗಿಸಿ, ಮೇಲೆ ಓದಲಾದ ಕ್ರಮ ಸಂ(6)ರಲ್ಲಿ ಅವರಿಂದ ಲಿಖಿತ ವಿಚಾರಣೆಯನ್ನು ಪಡೆಯಲಾಗಿದೆ. ನಂತರ ಮೇಲೆ ಓದಲಾದ ಕ್ರಮ ಸಂ(7) ರಲ್ಲಿ ಆರೋಪಿತ ಅಧಿಕಾರಿ ನೀಡಿದ ಲಿಖಿತ ವರದಿಯನ್ನು ಲೋಕೋಪಯೋಗಿ ಇಲಾಖೆಗೆ ಕಳುಹಿಸಿ ಸೂಕ್ತ ಅಭಿಪ್ರಾಯ ನೀಡುವಂತೆ ಕೋರಲಾಗಿತ್ತು. ಅದರಂತೆ ಮೇಲೆ ಓದಲಾದ ಕ್ರಮ ಸಂ(8) ರಲ್ಲಿ ಲೋಕೋಪಯೋಗಿ ಇಲಾಖೆಯು ಉತ್ತರ ನೀಡಿ ಆಪಾದಿತರ ಲಿಖಿತ ಹೇಳಿಕೆಯಲ್ಲಿ ಯಾವುದೇ ಸತ್ಯಾಂಶ ಇಲ್ಲದ ಕಾರಣ ಹಾಗೂ ಇವರು 1999ರ ಹಂಚಿಕೆ ನಿಯಮಾವಳಿಯ ಉಪಬಂಧಗಳನ್ನು ಉಲ್ಲಂಘಿಸಿರುವುದು ಸ್ಪಷ್ಟವಾಗುವುದರಿಂದ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಆಪಾದಿತ ಅಧಿಕಾರಿಗೆ ಸೂಕ್ತ ದಂಡನೆ ವಿಧಿಸುವ ಬಗ್ಗೆ ಸಿ.ಆ.ಸು.ಇಲಾಖೆಯೇ ಸೂಕ್ತ ತೀರ್ಮಾನ ತೆಗೆದುಕೊಳ್ಳುವಂತೆ ತಿಳಿಸಿದೆ. ಅದರಂತೆ ವಿಚಾರಣಾ ವರದಿಯನ್ನು ಹಾಗೂ ಆರೋಪಿತ ಅಧಿಕಾರಿ ನೀಡಿದ ಲಿಖಿತ ವರದಿಯ ಮೇಲಿನ ಲೋಕೋಪಯೋಗಿ ಇಲಾಖೆಯ ಅಭಿಪ್ರಾಯವನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ ನಂತರ ಸರ್ಕಾರವು ವಿಚಾರಣಾ ವರದಿಯನ್ನು ಅಂಗೀಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 62 ಎಸ್ಇಎನ್ 2006 (ಸಿಆಸುಇ 194 ಕೆಇವಿ 07), ಬೆಂಗಳೂರು,**
**ದಿನಾಂಕ: 20ನೇ ಮಾರ್ಚ್, 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 8(iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಈ. ರಾಧಾಕೃಷ್ಣ ಕೆ.ಎ.ಎಸ್. (ಅ.ಶ್ರೇ) ಅಧಿಕಾರಿ ಇವರಿಗೆ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (without cumulative effect) ತಡೆಹಿಡಿಯುವ ದಂಡನೆಯನ್ನು ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

ಪಿ.ಆರ್. 988

**ವಿಷಯ:** ಶ್ರೀ ಆರ್. ರಮೇಶಪ್ಪ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಹಾಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ ಇವರು ಆದಾಯ ಮೀರಿ ಸಂಪತ್ತು ಹೊಂದಿರುವ ಕುರಿತು ಸಕ್ಷಮ ನ್ಯಾಯಾಲಯದಲ್ಲಿ (ಅಟ್ಯಾಚ್‌ಮೆಂಟ್) ಜಪ್ತಿ ಮಾಡಲು ಅನುಮತಿ ನೀಡುವ ಕುರಿತು.

**ಓದಲಾಗಿದೆ:** ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಪತ್ರ ಸಂ: ಲೋಕ್:ಐಎನ್‌ವಿ(ಜಿ):ಸಿಟಿ:ಕ್ರೈಂ.40 2006 ದಿನಾಂಕ;04.10.2008.

**ಪ್ರಸ್ತಾವನೆ:**

ಶ್ರೀ ಆರ್. ರಮೇಶಪ್ಪ, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ ಹಾಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ,ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ ಇವರು ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಆಸ್ತಿ ಪಾಸ್ತಿಗಳನ್ನು ಅಕ್ರಮವಾಗಿ ಸಂಪಾದಿಸಿರುತ್ತಾರೆಂದು ಖಚಿತ ಮಾಹಿತಿಯ ಮೇರೆಗೆ ಸದರಿ ಆರೋಪಿತ ಅಧಿಕಾರಿಯ ವಿರುದ್ಧ ಬೆಂಗಳೂರು ನಗರ ಲೋಕಾಯುಕ್ತ ಠಾಣೆ ಮೊಕದ್ದಮೆ ಸಂ:40/2006 ರಲ್ಲಿ ದಿ:02.11.06 ಪ್ರಕರಣವನ್ನು ದಾಖಲಿಸಿಕೊಂಡು ದಿ:03.11.06 ರಂದು ಪಂಚರುಗಳ ಸಮಕ್ಷಮ ಆರೋಪಿತರಿಗೆ ಸಂಬಂಧಿಸಿದ ಮನೆ/ಕಟ್ಟಡಗಳು, ಕಛೇರಿ ಮುಂತಾದ ಸ್ಥಳಗಳ ಪರಿಶೋಧನೆಯನ್ನು ಲೋಕಾಯುಕ್ತ ಪೊಲೀಸರು ಮಾಡಿದ್ದು ಮುಂದಿನ ತನಿಖೆ ಕೈಗೊಳ್ಳಲಾಗಿದೆ.

ಸದರಿ ಆರೋಪಿತ ಅಧಿಕಾರಿಯು ತಮ್ಮ ಬಲ್ಲ ಆದಾಯ ಮೂಲಕ್ಕಿಂತ ಹೆಚ್ಚಿನ ಆಸ್ತಿ ಪಾಸ್ತಿಗಳನ್ನು ಹೊಂದಿರುವುದು ಧೃಢಪಟ್ಟಿದ್ದು, ಅವರು ಈ ಎಲ್ಲಾ ಆಸ್ತಿ ಪಾಸ್ತಿಗಳನ್ನು ವಿಲೇವಾರಿ ಮಾಡಬಹುದು ಎಂಬ ಗುಮಾನಿ ಇರುವುದರಿಂದ, ಕ್ರಿಮಿನಲ್ ಲಾ (ಅಮೆಂಡ್‌ಮೆಂಟ್) ಅಧ್ಯಾದೇಶ (ಆರ್ಡಿನೆನ್ಸ್) 1944ರ ಪ್ರಕಾರ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿನ ಸದರಿಯವರ ಚರ ಮತ್ತು ಸ್ಥಿರ ಆಸ್ತಿಗಳನ್ನು ಸರ್ಕಾರವು ಮುಟ್ಟುಗೋಲು ಹಾಕಿಕೊಳ್ಳುವ ಅವಶ್ಯಕತೆ ಇರುತ್ತದೆ ಎಂದು ಹಾಗೂ ಈ ಬಗ್ಗೆ ಘನ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬೇಕಾಗಿದ್ದು, ಈ ಸಂಬಂಧವಾಗಿ ಕ್ರಿಮಿನಲ್ ಲಾ ಅಮೆಂಡ್‌ಮೆಂಡ್ (ಆಡಿನೆನ್ಸ್) 1944ರ ಕಲಂ 3 ರೀತ್ಯಾ ಅನುಮತಿಯನ್ನು ತನಿಖಾಧಿಕಾರಿಗಳಿಗೆ ನೀಡುವಂತೆ ಮೇಲೆ ಓದಲಾದ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕೋರಿರುವರು. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂ:ಸಿಆಸುಇ 20 ಕೆಇವಿ 2008, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ಪರಿಶೀಲಿಸಿರುವಂತೆ ಶ್ರೀ ಆರ್. ರಮೇಶಪ್ಪ, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಹಾಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ ಇವರು ತಮ್ಮ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಸ್ಥಿರ ಮತ್ತು ಚರಾಸ್ತಿಗಳನ್ನು ಅಕ್ರಮವಾಗಿ ಗಳಿಸಿರುವ ಮಾಹಿತಿಯನ್ನು ಆಧರಿಸಿ ಕರ್ನಾಟಕ ಲೋಕಾಯುಕ್ತ ಪೊಲೀಸರು ಆರೋಪಿತ ಅಧಿಕಾರಿಯ ವಿರುದ್ಧ ಬೆಂಗಳೂರು ನಗರ ಲೋಕಾಯುಕ್ತ ಠಾಣೆಯಲ್ಲಿ ಮೊಕದ್ದಮೆ ಸಂ:40/2006 ರನ್ನು ದಿ:02.11.06ರಂದು ದಾಖಲಿಸಿ ಪಂಚರುಗಳ ಸಮಕ್ಷಮ ಆರೋಪಿತರಿಗೆ ಸಂಬಂಧಿಸಿದ ಮನೆ/ಕಟ್ಟಡಗಳು, ಕಛೇರಿ ಮುಂತಾದ ಸ್ಥಳಗಳ ಪರಿಶೋಧನೆ ಮಾಡಿದಾಗ, ಇವರು ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಸಂಪತ್ತು ಹೊಂದಿರುವುದು ಕಂಡುಬಂದಿದ್ದು, ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನೀಡಲಾಗಿರುವ ವಿವರಗಳುಳ್ಳ ಈ ಆಸ್ತಿಗಳನ್ನು ಆರೋಪಿತ ಅಧಿಕಾರಿಯು ವಿಲೇ ಮಾಡುವ ಗುಮಾನಿ ಇರುವುದರಿಂದ, ದಿ ಕ್ರಿಮಿನಲ್ ಲಾ ಅಮೆಂಡ್‌ಮೆಂಟ್ ಆರ್ಡಿನೆನ್ಸ್, 1944 ರ ಕಲಂ 3 ರಡಿ ಇವುಗಳನ್ನು ಜಪ್ತಿ (ಅಟ್ಯಾಚ್‌ಮೆಂಟ್) ಮಾಡುವ ಸಲುವಾಗಿ ಸಕ್ಷಮ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಲು ಈ ಮೂಲಕ ಸರ್ಕಾರದ ಅನುಮೋದನೆಯನ್ನು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

**ಸರ್ಕಾರಿ ಆದೇಶ ಸಂ:ಸಿಆಸುಇ 20 ಕೆಇವಿ 2008, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 09 ರ**

**ಅನುಬಂಧ**

| ಕ್ರ. ಸಂ. | ಆಸ್ತಿಯ ವಿವರಗಳು | ಆಸ್ತಿಯನ್ನು ಹೊಂದಿರುವ ವ್ಯಕ್ತಿಯ ಹೆಸರು | ಆಸ್ತಿಯ ಮೌಲ್ಯ (ರೂ.ಗಳಲ್ಲಿ) |
|---|---|---|---|
| 1. | ಬಿ.ಡಿ.ಎ. ನಿವೇಶನ ಸಂ:587, 8ನೇ ಬ್ಲಾಕ್ ಕೋರಮಂಗಲ (50*80) | ಆರೋಪಿತ ಹೆಸರಿನಲ್ಲಿ (ಅರ್ಜಿಸಿದ ದಿ:05.08.97) | 1,12,000/– |

| ಕ್ರ. ಸಂ. | ಆಸ್ತಿಯ ವಿವರಗಳು | ಆಸ್ತಿಯನ್ನು ಹೊಂದಿರುವ ವ್ಯಕ್ತಿಯ ಹೆಸರು | ಆಸ್ತಿಯ ಮೌಲ್ಯ (ರೂ.ಗಳಲ್ಲಿ) |
|---|---|---|---|
| 2. | ಚಿತ್ರದುರ್ಗ ಜಿಲ್ಲೆ, ಹೊಳಲ್ಕೆರೆ ತಾ: ಚೀರನಹಳ್ಳಿ ಗ್ರಾಮದ ಈ ಕೆಳಕಂಡ ಸರ್ವೆ ನಂಬರ್‌ಗಳಲ್ಲಿರುವ ಜಮೀನು:<br>1 ಸರ್ವೆ ನಂ:45/1ಪಿ–1 ಎಕರೆ<br>2 ಸರ್ವೆ ನಂ:45/1ಪಿ–1 ಎಕರೆ<br>3 ಸರ್ವೆ ನಂ:45/1–24 ಗುಂಟೆ<br>4 ಸರ್ವೆ ನಂ:45/1 ಪಿ–23 ಗುಂಟೆ | ಆರೋಪಿತರ ತಾಯಿ ಶ್ರೀಮತಿ ಗೌರಮ್ಮ (ಅರ್ಜಿಸಿದ ದಿ: 04.12.2000) | 1,62,000/– |
| 3. | ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾ: ಚೀರನಹಳ್ಳಿ ಗ್ರಾಮದ ಈ ಕೆಳಕಂಡ ಸರ್ವೆ ನಂಬರ್‌ಗಳಲ್ಲಿರುವ ಜಮೀನು:<br>1ಸರ್ವೆ ನಂ:45/1ಪಿ–22 ಗುಂಟೆ<br>2ಸರ್ವೆ ನಂ:45/1ಪಿ–22 ಗುಂಟೆ<br>3ಸರ್ವೆ ನಂ:45/1ಪಿ–23 ಗುಂಟೆ | ಆರೋಪಿತರ ತಾಯಿ ಶ್ರೀಮತಿ ಗೌರಮ್ಮ (ಅರ್ಜಿಸಿದ ದಿ: 04.12.2000) | 1,82,000/– |
| 4. | ಫ್ಲಾಟ್ ಸಂ:203, ಕಿರಣ್ ಕಂಫರ್ಟ್, ಬನಶಂಕರಿ, 3ನೇ ಹಂತ | ಆರೋಪಿತ ತಂದೆ ಶ್ರೀ ಟಿ. ರುದ್ರಪ್ಪ ಶಿವರುದ್ರಪ್ಪ ನವರ ಹೆಸರಿನಲ್ಲಿ (ಅರ್ಜಿಸಿದ ದಿ:24.03.05) | 8,00,000/– |
| 5. | ಚಿತ್ರದುರ್ಗ ಜಿಲ್ಲೆ, ಹೊಳಲ್ಕೆರೆ ತಾ: ಚೀರನಹಳ್ಳಿ ಗ್ರಾಮದ ಈ ಕೆಳಕಂಡ ಸರ್ವೆ ನಂಬರ್‌ಗಳಲ್ಲಿರುವ ಜಮೀನು:<br>1 ಸರ್ವೆ ನಂ:11/2 – 3 ಎಕರೆ<br>2 ಸರ್ವೆ ನಂ:11/3 – 3 ಎಕರೆ 39 ಗುಂಟೆ | ಆರೋಪಿತರ ತಾಯಿ ಶ್ರೀಮತಿ ಗೌರಮ್ಮ ಮತ್ತು ಸಹೋದರ ಶ್ರೀ ರಂಗಪ್ಪ (ಅರ್ಜಿಸಿದ ದಿ: 24.03.2005) | 2,71,000/– |
| 6. | ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾ: ಚೀರನಹಳ್ಳಿ ಗ್ರಾಮದ ಈ ಕೆಳಕಂಡ ಸರ್ವೆ ನಂಬರ್‌ಗಳಲ್ಲಿರುವ ಜಮೀನು:<br>1 ಸರ್ವೆ ನಂ:33/2 – 12 ಗುಂಟೆ<br>2 ಸರ್ವೆ ನಂ:33/1 – 20 ಗುಂಟೆ | ಆರೋಪಿತರ ಸಹೋದರ ಶ್ರೀ ರಂಗಪ್ಪ(ಅರ್ಜಿಸಿದ ದಿ: 19.05.2006) | 31,000/– |
| 7. | ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ಈ ಕೆಳಕಂಡ ಸರ್ವೆ ನಂಬರ್‌ಗಳಲ್ಲಿರುವ ಜಮೀನು:<br>1 ಸರ್ವೆ ನಂ:188/1 – 08 ಗುಂಟೆ<br>2 ಸರ್ವೆ ನಂ: 33/1 – 11 ಗುಂಟೆ | ಆರೋಪಿತರ ಸಹೋದರ ಶ್ರೀ ರಂಗಪ್ಪ (ಅರ್ಜಿಸಿದ ದಿ: 19.06.2006) | 23,000/– |
| 8. | ಮನೆ ನಂ:14, ಪುಟ್ಟಲಿಂಗಪ್ಪ ರಸ್ತೆ, ಪದ್ಮನಾಭನಗರ, ಬೆಂಗಳೂರು | ಆರೋಪಿತರ ಅತ್ತೆ ಶ್ರೀಮತಿ ಸರೋಜಮ್ಮ (ಅರ್ಜಿಸಿದ ದಿ:19.02.1989) | ಕರ್ನಾಟಕ ಲೋಕಾಯುಕ್ತ ಸಂಸ್ಥೆಯ ತಾಂತ್ರಿಕ ವಿಭಾಗದಿಂದ ಮನೆಯ ಮೌಲ್ಯಮಾಪನ ಮಾಡಲಾಗುತ್ತಿದೆ. |
| 9. | ಮಾರುತಿ ಸ್ವಿಫ್ಟ್ ಕಾರು ನೊಂ ಸಂ: ಕೆಎ 05 ಎಂಸಿ 7223 | ಆರೋಪಿತ ಹೆಸರಿನಲ್ಲಿ (ಅರ್ಜಿಸಿದ ದಿ:11.08.05) | 4,83,435/– |

| ಕ್ರ. ಸಂ. | ಆಸ್ತಿಯ ವಿವರಗಳು | ಆಸ್ತಿಯನ್ನು ಹೊಂದಿರುವ ವ್ಯಕ್ತಿಯ ಹೆಸರು | ಆಸ್ತಿಯ ಮೌಲ್ಯ (ರೂ.ಗಳಲ್ಲಿ) |
|---|---|---|---|
| 10. | ಹೀರೋ ಹೊಂಡಾ ಮೋಟಾರ್ ಸೈಕಲ್ ನೊಂ.ಸಂ ಕೆಎ 05 ಇಎಲ್ 4583 | ಆರೋಪಿತರ ಮಗ ಆರ್.ಉಲ್ಲಾಸ್ ರವರ ಹೆಸರಿನಲ್ಲಿ (ಅರ್ಜಿಸಿದ ದಿ:11.12.02) | 40,624/– |
| 11. | ಬಜಾಜ್ ಕ್ಯಾಲಿಬರ್ ಮೋಟಾರ್ ಸೈಕಲ್ ನೊಂ.ಸಂ. ಕೆಎ 05 ಇಸಿ 6547 | ಆರೋಪಿತರ ಪತ್ನಿ ಶ್ರೀಮತಿ ವನಿತಾ ರವರ ಹೆಸರಿನಲ್ಲಿ (ಅರ್ಜಿಸಿದ ದಿ:12.04.06) | 42,469/– |
| 12. | ಗೃಹೋಪಯೋಗಿ ವಸ್ತುಗಳು (ಮಹಜರು ದಿ:03.11.06 ರಲ್ಲಿ ತೋರಿಸಿರುವಂತೆ) | ಆರೋಪಿತರ ಹೆಸರಿನಲ್ಲಿ | 6,50,620/– |

**ಎಚ್.ಆರ್. ನಾಗೇಂದ್ರ**

ಪಿ.ಆರ್. 989

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಬೆಂಗಳೂರಿನ ಬೌರಿಂಗ್ ಮತ್ತು ಲೇಡಿಕರ್ಜನ್ ಆಸ್ಪತ್ರೆಯ ನಿವೃತ್ತ ವೈದ್ಯಕೀಯ ಅಧೀಕ್ಷಕರು ಹಾಗೂ 8 ಅಧಿಕಾರಿ/ನೌಕರರ ವಿರುದ್ಧ ದಾಖಲಿಸಿದ ದೂರಿನ ಬಗ್ಗೆ – ಇಲಾಖಾ ವಿಚಾರಣೆ.

**ಓದಲಾಗಿದೆ:**
1. ಡಿ.ಓ.ನಂ.ಸಿಓ ಎಂಪಿಟಿ/ಯುಪಿಎಲ್ ಓಕೆ/ಬಿಸಿಡಿ–193/2003/ಡಿಆರ್ ಇ–5 ದಿನಾಂಕ: 22.08.2005.
2. ಸರ್ಕಾರಿ ಆದೇಶ ಸಂಖ್ಯೆ: ಆಕುಕ 130 ಎಂಎಂಸಿ 2005 ದಿನಾಂಕ: 05.01.2006.
3. ಸರ್ಕಾರಿ ಆದೇಶ ಸಂಖ್ಯೆ: ಆಕುಕ 130 ಎಂಎಂಸಿ 2005 ದಿನಾಂಕ: 05.01.2006.
4. ಪತ್ರ ಸಂಖ್ಯೆ: ಎಲ್ ಓಕೆ/ಎಆರ್ ಇ–3/ಇನ್‌ಕ್ಯೂ–11/2007 ದಿನಾಂಕ: 17.01.2008.

**ಪ್ರಸ್ತಾವನೆ:**

ನಿಬಂಧಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಎ.ಪಿ. ರಂಗನಾಥ, ವಕೀಲರು ಇವರು ಬೌರಿಂಗ್ ಮತ್ತು ಲೇಡಿಕರ್ಜನ್ ಆಸ್ಪತ್ರೆಯಲ್ಲಿ ಔಷಧಿ ಹಾಗೂ ರಾಸಾಯನಿಕಗಳ ಖರೀದಿಯಲ್ಲಿ ಸರ್ಕಾರದ ಹಣದ ದುರುಪಯೋಗವಾಗಿರುವ ಬಗ್ಗೆ ಕರ್ನಾಟಕ ಲೋಕಾಯುಕ್ತಕ್ಕೆ ಅಫಿಡವೆಟ್‌ನೊಂದಿಗೆ ದೂರು ಸಲ್ಲಿಸಿದ್ದು, ಕರ್ನಾಟಕ ಲೋಕಾಯುಕ್ತವು ಕೆಳಕಂಡವರ ವಿರುದ್ಧ ವರದಿಯನ್ನು ಸಲ್ಲಿಸಿತ್ತು.

(1) ಡಾ: ಎಲ್. ಚಂದ್ರಮ್ಮ ವೈದ್ಯಕೀಯ ಅಧೀಕ್ಷಕರು
(2) ಶ್ರೀಮತಿ ಆರ್.ವಿ. ರಾಧಾ, ಕಾರ್ಯದರ್ಶಿ ಮತ್ತು ಖಜಾಂಚಿ
(3) ಶ್ರೀ ಶಿವನಂಜೇಗೌಡ, ಲೇ ಕಾರ್ಯದರ್ಶಿ ಮತ್ತು ಖಜಾಂಚಿ
(4) ಶ್ರೀ ಕೃಷ್ಣಪ್ಪ, ಕಛೇರಿ ಅಧೀಕ್ಷಕರು
(5) ಶ್ರೀ ಕಾಂತರಾಜು, ಪ್ರಥಮ ದರ್ಜೆ ಸಹಾಯಕರು
(6) ಶ್ರೀ ವಿಕಾರ ಅಹ್ಮದ್, ಪ್ರಥಮ ದರ್ಜೆ ಸಹಾಯಕರು
(7) ಶ್ರೀ ಮಹ್ಮದ್ ದಾದಾಪೀರ, ಪ್ರಥಮ ದರ್ಜೆ ಸಹಾಯಕರು
(8) ಶ್ರೀಮತಿ ಎ.ಎಂ. ಪಿಂಟೋ, ಪ್ರಥಮ ದರ್ಜೆ ಸಹಾಯಕರು
(9) ಶ್ರೀ ಸತೀಶ್, ದ್ವಿತೀಯ ದರ್ಜೆ ಸಹಾಯಕರು

ಬೌರಿಂಗ್ ಮತ್ತು ಲೇಡಿಕರ್ಜನ್ ಆಸ್ಪತ್ರೆಯಲ್ಲಿ ಮೇಲ್ಕಂಡ ಅಧಿಕಾರಿ/ನೌಕರರು ಔಷಧ ಹಾಗೂ ರಾಸಾಯನಿಕಗಳ ಖರೀದಿಯಲ್ಲಿ ಹೆಚ್ಚುವರಿ ಹಣಪಾವತಿ ಮಾಡುವುದಕ್ಕೆ ಜವಾಬ್ದಾರರಾಗಿದ್ದು, ಇವರು ಕೆ.ಟಿ.ಟಿ.ಪಿ. ಆಕ್ಟ್ ಆರ್ಥಿಕಾಧಿಕಾರದ ಕೈಪಿಡಿ, ದಾಸ್ತಾನು ಖರೀದಿ ಕೈಪಿಡಿ, ಹಣಕಾಸು ನಿಯಮಗಳು, ಹಾಗೂ ಟೆಂಡರ್ ಷರತ್ತುಗಳನ್ನು ಉಲ್ಲಂಘಿಸಿರುತ್ತಾರೆ. ಇದರಿಂದ ಸರ್ಕಾರಕ್ಕೆ ರೂ.45,93,342/–ಗಳ ನಷ್ಟವನ್ನು ಉಂಟುಮಾಡಿರುತ್ತಾರೆ. ಇದರಿಂದ ಇವರು ದುರುಪಯೋಗ ಹಾಗೂ ಅಕ್ರಮಗಳಿಗೆ ಜವಾಬ್ದಾರರಾಗಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಯ ವೈದ್ಯಕೀಯ ಅಧೀಕ್ಷರಾಗಿದ್ದ ಡಾ: ಎಲ್. ಚಂದ್ರಮ್ಮ ಮತ್ತು ಲೇಕಾರ್ಯದರ್ಶಿ ಮತ್ತು ಖಜಾಂಚಿಯಾಗಿದ್ದ ಶ್ರೀಮತಿ ಆರ್.ವಿ. ರಾಧಾರವರುಗಳು ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 214ರಡಿ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ಲೋಕಾಯುಕ್ತರವರಿಗೆ ವಹಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೌರಿಂಗ್ ಮತ್ತು ಲೇಡಿಕರ್ಜನ್ ಆಸ್ಪತ್ರೆಯ ಕೆಳಕಂಡ ಅಧಿಕಾರಿಗಳು/ಸಿಬ್ಬಂದಿಗಳ ವಿರುದ್ಧ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14–ಎ ರಡಿ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ಲೋಕಾಯುಕ್ತರವರಿಗೆ ವಹಿಸಲಾಗಿತ್ತು.

(1) ಶ್ರೀ ಶಿವನಂಜೇಗೌಡ, ಲೇ ಕಾರ್ಯದರ್ಶಿ ಮತ್ತು ಖಜಾಂಚಿ
(2) ಶ್ರೀ ಕೃಷ್ಣಪ್ಪ, ಕಛೇರಿ ಅಧೀಕ್ಷಕರು
(3) ಶ್ರೀ ಕಾಂತರಾಜು, ಪ್ರಥಮ ದರ್ಜೆ ಸಹಾಯಕರು
(4) ಶ್ರೀ ವಿಕಾರ ಅಹ್ಮದ್, ಪ್ರಥಮ ದರ್ಜೆ ಸಹಾಯಕರು
(5) ಶ್ರೀ ಮಹ್ಮದ್ ದಾದಾಪೀರ, ಪ್ರಥಮ ದರ್ಜೆ ಸಹಾಯಕರು
(6) ಶ್ರೀಮತಿ ಎ.ಎಂ.ಪಿಂಟೋ, ಪ್ರಥಮ ದರ್ಜೆ ಸಹಾಯಕರು
(7) ಶ್ರೀ ಸತೀಶ್, ದ್ವಿತೀಯ ದರ್ಜೆ ಸಹಾಯಕರು

ಅಪರ ನಿಬಂಧಕರು, ವಿಚಾರಣೆಗಳು–3 ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (4)ರಲ್ಲಿ ಓದಲಾದ ಪತ್ರದೊಂದಿಗೆ ಮಾನ್ಯ ಕರ್ನಾಟಕ ಲೋಕಾಯುಕ್ತರ ದಿನಾಂಕ: 08.01.2008ರ ಆದೇಶವನ್ನು ಲಗತ್ತಿಸಿ, ಡಾ: ಎಲ್. ಚಂದ್ರಮ್ಮ ನಿವೃತ್ತ ವೈದ್ಯಕೀಯ ಅಧೀಕ್ಷಕರು, ಶ್ರೀ ಆರ್.ವಿ. ರಾಧಾ, ನಿವೃತ್ತ ಲೇಕಾರ್ಯದರ್ಶಿ ಮತ್ತು ಖಜಾಂಚಿ ಮತ್ತು ಶ್ರೀ ಕೃಷ್ಣಪ್ಪ, ನಿವೃತ್ತ ಕಛೇರಿ ಅಧೀಕ್ಷಕರು, ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು ಇವರ ವಿರುದ್ಧ ಕಾನೂನು ಪ್ರಕಾರ ಕ್ರಮಕೈಗೊಳ್ಳಲು ಕಳುಹಿಸಿರುತ್ತಾರೆ. ಕರ್ನಾಟಕ ಲೋಕಾಯುಕ್ತವು 1ನೇ ಆಪಾದಿತರಾದ ಡಾ:ಎಲ್. ಚಂದ್ರಮ್ಮ ಇವರು ದಿನಾಂಕ:28.02.2003ರಂದು, 2ನೇ ಆಪಾದಿತರಾದ ಶ್ರೀಮತಿ ಆರ್.ವಿ. ರಾಧಾ ಇವರು ದಿನಾಂಕ:30.09.2003ರಂದು ಹಾಗೂ 4ನೇ ಆಪಾದಿತರಾದ ಶ್ರೀ ಕೃಷ್ಣಪ್ಪ ಇವರು ದಿನಾಂಕ: 31.12.2002ರಂದು ಸೇವೆಯಿಂದ ನಿವೃತ್ತರಾಗಿರುವುದರಿಂದ ಸದರಿಯವರ ವಿರುದ್ಧದ ಆರೋಪಗಳ ಘಟನೆಯು ನಡೆದ ನಾಲ್ಕು ವರ್ಷಗಳ ಒಳಗಾಗಿ ಶಿಸ್ತು ನಡವಳಿ ಪ್ರಾರಂಭಿಸದಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿ ನಿಲ್ಲುವಂತಹದಲ್ಲವೆಂಬ ಪ್ರಯುಕ್ತ ಇವರ ವಿರುದ್ಧದ ಆರೋಪಗಳನ್ನು ಕೈಬಿಡುವಂತೆ ಮತ್ತು ಸದರಿಯವರಿಂದ ಉಂಟಾಗಿರುವ ನಷ್ಟವನ್ನು ಕಾನೂನು ಪ್ರಕಾರ ವಸೂಲು ಮಾಡಲು ವರದಿ ಮಾಡಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಆಪಾದಿತ ಸರ್ಕಾರಿ ನೌರರಾದ ಡಾ: ಎಲ್. ಚಂದ್ರಮ್ಮ ನಿವೃತ್ತ ವೈದ್ಯಕೀಯ ಅಧೀಕ್ಷಕರು, ಶ್ರೀಮತಿ ಆರ್.ವಿ. ರಾಧಾ, ನಿವೃತ್ತ ಲೇಕಾರ್ಯದರ್ಶಿ ಮತ್ತು ಖಜಾಂಚಿ ಮತ್ತು ಶ್ರೀ ಕೃಷ್ಣಪ್ಪ, ನಿವೃತ್ತ ಕಛೇರಿ ಅಧೀಕ್ಷಕರು ಇವರ ವಿರುದ್ಧದ ಆರೋಪಗಳನ್ನು ಕೈಬಿಡಲು ಹಾಗೂ ಇವರಿಂದ ಸರ್ಕಾರಕ್ಕೆ ಆದ ನಷ್ಟ ವಸೂಲಿ ಮಾಡುವುದಕ್ಕೆ ಸಂಬಂಧಿಸಿದಂತೆ ಕರ್ನಾಟಕ ಕಂಡಕ್ಟ್ ಆಫ್ ಗೌರ್ನಮೆಂಟ್ ಲಿಟಿಗೇಷನ್ ರೂಲ್ಸ್ 1985ರ ಭಾಗ – II ನಿಯಮ 3ರನ್ನು ಅನುಸರಿಸಿ ಕ್ರಮ ಜರುಗಿಸಲು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 130 ಎಂಎಂಪಿ 2005, ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2009**

ಕರ್ನಾಟಕ ನಾಗರೀಕ ಸೇವಾ ನಿಯಮಗಳ, ನಿಯಮ 214(2)(ಬಿ) (ii)ರ ಪ್ರಕಾರ ಡಾ: ಎಲ್. ಚಂದ್ರಮ್ಮ ನಿವೃತ್ತ ವೈದ್ಯಕೀಯ ಅಧೀಕ್ಷಕರು, ಶ್ರೀಮತಿ ಆರ್.ವಿ. ರಾಧಾ, ನಿವೃತ್ತ ಲೇಕಾರ್ಯದರ್ಶಿ ಮತ್ತು ಖಜಾಂಚಿ ಮತ್ತು ಶ್ರೀ ಕೃಷ್ಣಪ್ಪ, ನಿವೃತ್ತ ಕಛೇರಿ ಅಧೀಕ್ಷಕರು, ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು ಇವರ ವಿರುದ್ಧದ ಆರೋಪಗಳನ್ನು ಕೈಬಿಡಲಾಗಿದೆ.

ಆಪಾದಿತ ಸರ್ಕಾರಿ ಅಧಿಕಾರಿ/ನೌಕರರಿಂದ ಸರ್ಕಾರಕ್ಕೆ ಆದ ನಷ್ಟ ವಸೂಲಿ ಮಾಡುವುದಕ್ಕೆ ಸಂಬಂಧಪಟ್ಟಂತೆ ಕರ್ನಾಟಕ ಕಂಡಕ್ಟ್ ಆಫ್ ಗೌರ್ನಮೆಂಟ್ ಲಿಟಿಗೇಷನ್ ರೂಲ್ಸ್ 1985ರ ಭಾಗ – II ನಿಯಮ 3ರನ್ವಯ ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇವರು ಕ್ರಮ ಜರುಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀರಾಮರೆಡ್ಡಿ**

ಪಿ.ಆರ್. 990

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು ಇದರ ಉಪಾಧ್ಯಕ್ಷರ ಹಾಗೂ ಅವರ ಆಪ್ತ ಶಾಖೆಯ ಸಿಬ್ಬಂದಿ ಹಾಗೂ ಇನ್ನಿತರ ವೆಚ್ಚಗಳನ್ನು ಖಜಾನೆಯಿಂದ ಡ್ರಾ ಮಾಡಲು ಬಡವಾಡೆ ಅಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 68 ಶಿಸನೇ 2008, ದಿನಾಂಕ:05/08/2008 ಮತ್ತು 11/08/2008.
2. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಆದೇಶ ಸಂಖ್ಯೆ: ಕಸನಿ 47 ಕಅ 2008–09, ದಿನಾಂಕ:09/02/2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ:05/08/2008ರ ಆದೇಶದಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು ಇದನ್ನು ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ. ದಿನಾಂಕ:11/08/2008ರ ಆದೇಶದಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಇದರ ಉಪಾಧ್ಯಕ್ಷರಿಗೆ ಸಂಪುಟ ದರ್ಜೆ ಸಚಿವರ ಸ್ಥಾನಮಾನವನ್ನು ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಆದೇಶದಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಉಪಾಧ್ಯಕ್ಷರ ಹಾಗೂ ಕಛೇರಿ ವೆಚ್ಚಗಳನ್ನು ನಿರ್ವಹಿಸಲು ಲೆಕ್ಕ ಶೀರ್ಷಿಕೆ "2205–00–8–00–0–09–059–ಇತರೆ ಖರ್ಚು" ಇದರಡಿ ರೂ.10.00 ಲಕ್ಷಗಳನ್ನು ಬಿಡುಗಡೆ ಮಾಡಿರುತ್ತದೆ. ಈ ಸಂಬಂಧ ಹಣ ಬಿಡುಗಡೆಗೆ ಅನುದಾನದ ಬಿಲ್ಲನ್ನು ಸಹಿಯೊಂದಿಗೆ ಕಳುಹಿಸಿಕೊಡಲು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯನ್ನು ಕೋರಿರುತ್ತಾರೆ.

ಅನಿವಾಸಿ ಭಾರತೀಯರ ಸಮಿತಿ ಹೊಸದಾಗಿ ರಚನೆಯಾಗಿರುವುದರಿಂದ ಈ ಸಮಿತಿಯ ಉಪಾಧ್ಯಕ್ಷರ ಹಾಗೂ ಕಛೇರಿ ವೆಚ್ಚಗಳನ್ನು ಭರಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ರೂ.10.00 ಲಕ್ಷಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಬಿಡುಗಡೆ ಮಾಡಿದ್ದು, ಈ ಬಿಡುಗಡೆ ಮಾಡಿದ್ದ ಹಣವನ್ನು ಖಜಾನೆಯಿಂದ ಪಡೆಯಲು ಬಡವಾಡೆ ಅಧಿಕಾರಿ ಯಾರು ಎಂಬುದರ ಬಗ್ಗೆ ಉಲ್ಲೇಖಿತ ಆದೇಶಗಳಲ್ಲಿ ಸ್ಪಷ್ಟ ಪಡಿಸದೇ ಇರುವುದರಿಂದ ಖಜಾನೆಯಿಂದ ಡ್ರಾ ಮಾಡಲು ಸಾಧ್ಯವಾಗುವುದಿಲ್ಲ. ಪ್ರಸ್ತುತ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿ ಸಚಿವರುಗಳ ಪ್ರವಾಸ ಭತ್ಯೆ ಹಾಗೂ ಇನ್ನಿತರ ಭತ್ಯೆಗಳನ್ನು ಪಡೆಯಲು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಲೆಕ್ಕಪತ್ರ–2) ಶಾಖೆಯಿಂದ ಕ್ರಮ ಕೈಗೊಳ್ಳುತ್ತಿರುವುದರಿಂದ ಮೇಲ್ಕಂಡ ಸಮಿತಿಯ ಉಪಾಧ್ಯಕ್ಷರ ಹಾಗೂ ಕಛೇರಿ ವೆಚ್ಚಗಳನ್ನು ಪಾವತಿಸಲು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಲೆಕ್ಕಪತ್ರ–2) ಶಾಖೆಯ ಅಧೀನ ಕಾರ್ಯದರ್ಶಿಯವರಿಗೆ ಅಧಿಕಾರ ನೀಡುವುದು ಸೂಕ್ತವೆಂದು ಸರ್ಕಾರವು ನಿರ್ಧರಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 68 ಶಿಸನೇ 2008(ಭಾ), ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ **"ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ"** ಇದರ ಉಪಾಧ್ಯಕ್ಷರ ಹಾಗೂ ಕಛೇರಿ ವೆಚ್ಚಗಳನ್ನು ಲೆಕ್ಕ ಶೀರ್ಷಿಕೆ 2205–00–8–00–0–09–059–ಇತರೆ ಖರ್ಚು ಇದರಡಿಯಲ್ಲಿ ಪಾವತಿಸಲು ಅನುವಾಗುವಂತೆ ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಲೆಕ್ಕಪತ್ರ–2) ಇವರನ್ನು ಬಡವಾಡೆ ಅಧಿಕಾರಿಯನ್ನಾಗಿ (Drawing & Disbursing Officer) ನೇಮಿಸಲಾಗಿದೆ.

2. ಸದರಿ ಬಡವಾಡೆ ಅಧಿಕಾರಿಯು ಅನಿವಾಸಿ ಭಾರತೀಯರ ಸಮಿತಿಯ ಉಪಾಧ್ಯಕ್ಷರ ಹಾಗೂ ಅವರ ಕಛೇರಿ ವೆಚ್ಚಗಳನ್ನು ಪಾವತಿಸುವ ಸಂಬಂಧ ನಗದು ಪುಸ್ತಕ ಮತ್ತು ಇನ್ನಿತರೆ ಅವಶ್ಯಕ ದಾಖಲೆ ವಹಿಗಳನ್ನು ಅವರ ಸುಪರ್ದಿನಲ್ಲಿ ಇಟ್ಟುಕೊಳ್ಳುವುದು. ನಂತರ ಈ ದಾಖಲೆಗಳನ್ನು ಮಹಾಲೇಖಪಾಲರ ಲೆಕ್ಕ ಪರಿಶೋಧನೆಗೆ ಒದಗಿಸತಕ್ಕದ್ದು.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 211–ವೆಚ್ಚ 12/09 ದಿನಾಂಕ:12/03/2009ರಲ್ಲಿ ನೀಡಿರುವ ಸಹಮತಿರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ತಿಪ್ಪೇಸ್ವಾಮಿ**

ಪಿ.ಆರ್. 991

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ನಿಂಬಾಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 15.12.08ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2008–09/6444.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ನಿಂಬಾಳ ಸಣ್ಣ ನೀರಾವರಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ನಿಂಬಾಳ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 17/09/87
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ: 15/12/90.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಆಳಂದದ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ)ದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್ಎಸಿ ಸಂಖ್ಯೆ | ನಿಂಬಾಳ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 131/03 | 49/ | 0–29 | 48555 |
| 2 | 13203 | 337/3 | 0–19 | 33186 |
| 3 | 173/03 | 59/3 | 0–39 | 68118 |
| | **ಒಟ್ಟು** | | | **149859** |

● ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಮೇಲ್ಕಂಡ ಎಲ್.ಎ.ಸಿ. ಪ್ರಕರಣಗಳಲ್ಲಿ ನ್ಯಾಯಾಲಯವು ನೀಡಿರುವ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅವಶ್ಯಕತೆಯಿಲ್ಲವೆಂದು ಕಾನೂನು ಇಲಾಖೆಯು ಅನುಕ್ರಮವಾಗಿ ಪತ್ರ ಸಂಖ್ಯೆ:ಲಾ 1099 ಎಲ್ಎಸ್ಎ 2006, ಲಾ 1100 ಎಲ್ಎಸ್ಎ 2006 ಹಾಗೂ ಲಾ 1089 ಎಲ್ಎಸ್ಎ 2006, ದಿನಾಂಕ: 11/09/06ರಲ್ಲಿ ಅಭಿಪ್ರಾಯ ನೀಡಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 23 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2009**

ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ನಿಂಬಾಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ನಿಂಬಾಳ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ.1,49,859–00 ಗಳನ್ನು (ಒಂದು ಲಕ್ಷದ ನಲವತ್ತೊಂಭತ್ತು ಸಾವಿರದ ಎಂಟುನೂರ ಐವತ್ತೊಂಭತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಸಿ 2008, ದಿನಾಂಕ: 16/09/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾರಕರ ಶೆಟ್ಟಿ**

ಪಿ.ಆರ್. 992

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## INFRASTRUCTURE DEVELOPMENT SECRETARIAT

**Sub:** Release of funds for pre-feasibility studies under taken by the consultants.

**Read:**
1. Letter No.iDeCK.2008-09/1407 dated 20.3.2009 from Chief Operations Officer, iDeCK.
2. Letter date 12.03.2009 from Director (I/c), KSIIDC – IL & FS Projet Development Co., Ltd.
3. Letter No.KESL/IDD-GoK/170309 dated 17.03.2009 from Chief Executive Officer, Karnataka Enterprise Solutions Ltd.

**Preamble:**

In the letter read at Sl.No. (1) above, iDeCK has sent a list of following 10 projects to be taken up by iDeCK and a proposal indicating the scope of services for each of the studies:-

(1) River / Sea water front development in Karnataka
(2) Dev. of Education Infrastructure across the State
(3) Tumkur Solid Waste Management
(4) Dev. of Agri-markets &Logistic Hubs across the State
(5) Feasibility study for Car Parking (including buses & passenger amenities) at Brindavan Gardens, Mysore.
(6) Dev. of Urban enterainment centres in Major Cities of Karnataka
(7) Dev. of Lake Conservation Project across Karnataka
(8) Rejuvenation of Urban zones (peta-area)
(9) Eco-Tourism feasibility at different places in Karnataka.
(10) Dev. of Health Infrastructure across the State.

Like wise in letter read at Sl.No. (2) above, KSIIDC – IL & FS Project Development Co., Ltd., has confirmed their interest in carrying out pre-feasibility study for the following 7 projects, which were allocated to KIPDC and the identification of team members for these projects and also they have mentioned the terms of payment and timeline for conducting the study:

(1) Dev. of Intermodel Transit Hubs at Belgaum, Hubli-Dharwad
(2) Dev.of Intermodel Transit Hubs at Mysore, Bangalore (Dabaspet), Bellary and other places
(3) Dev. of Honnavara Port to meet Iron Ore & steel sector
(4) Dev. of modern foot over bridges on PPP format for each city
(5) Dev. of multi-level car parking plazas in major cities of Karnataka
(6) Water supply, sanitation and solid waste management as a single package for each city.
(7) River front development: Mangala corniche

In the letter read at Sl.No.(3) above, CEO, KESOL has confirmed their interest for taking up pre-feasibility study for the following 4 projects:-

(1) Belgaum ring road project
(2) Improvement of it is through PPP
(3) Marine Sea food logistics
(4) Warehousing logistics across the State of Karnataka

4. After considering the above proposal, it has been decided to take up all the above said studies out of the amount provided during 2008-09. Hence this order.

**Government Order No. IDD 71 IDM 2008, Bangalore, Dated: 20th March 2009**

After careful examination of the above aspects, Government is pleased to release an amount of Rs.150.00 lakhs (Rupees one crore and fifty lakhs) only to KSIIDC being the fee for conducting the pre-feasibility study of the above said projects. KSIIDC inturn to release the above said amount to the consultants based on the milestones achieved and under directions from IDD.

2. This amount shall be met out of the funds available under the Head of Account 3451-00-090-1-06-125 – Infrastructure Preliminary Studies – Modernization (Plan) 2008-09.

3. Managing Director, KSIIDC is authorized to draw this amount on a payee's receipt duly countersigned by the Under Secretary to Government, Infrastructure Development Department.

4. This order is issued in accordance with the delegation of financial powers to Principal Secretaries to Government vide G.O. No. FD 1 TFP 2008 dated 16.5.08.

By Order and in the name of Governor of Karnataka,

**N. MANJULA GEETHA**

P.R. 993

Under Secretary to Government,
Infrastructure Development Department.

**ಸಹಕಾರ ಸಚಿವಾಲಯ**

**ವಿಷಯ:** ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 3769/2008 (ಸಿಎಸ್) ರಲ್ಲಿ ಕೋದಂಡರಾಮಸ್ವಾಮಿ ವ್ಯವಸಾಯ ಸೇವಾ ಸಹಕಾರ ಸಂಘ ನಿಯಮಿತ, ಮೈಸೂರು ವಿರುದ್ಧ ರಾಜ್ಯ ಸರ್ಕಾರ ಮತ್ತು ಇತರರು

**ಓದಲಾಗಿದೆ:** ಸರ್ಕಾರಿ ವಕೀಲರ ಪತ್ರ ದಿನಾಂಕ: 25.02.2009.

**ಪ್ರಸ್ತಾವನೆ:**

ಉಲ್ಲೇಖಿತ ಸರ್ಕಾರಿ ವಕೀಲರ ಪತ್ರದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ಮೇಲ್ಕಂಡ ರಿಟ್ ಅರ್ಜಿಯನ್ನು ದಿನಾಂಕ:20.02.2009ರಲ್ಲಿ ಇತ್ಯರ್ಥಪಡಿಸಿದ್ದು, ಈ ರಿಟ್ ಅರ್ಜಿಯ ಸಂಬಂಧ ಗೌರವ ಉಚ್ಚ ನ್ಯಾಯಾಲಯವು ನೀಡಿದ ಆದೇಶಕ್ಕೆ ಪ್ರತಿವಾದಿಗಳು ಸಕಾರಾತ್ಮಕ ಕ್ರಮವನ್ನು ಕೈಗೊಳ್ಳದ ಕಾರಣ ವೆಚ್ಚ ರೂ.10,000.00ಗಳನ್ನು ಭರಿಸಲು ಆದೇಶಿಸಿರುತ್ತದೆ ಎಂದೂ ಈ ವೆಚ್ಚವನ್ನು 2,3 ಮತ್ತು 5ನೇ ಪ್ರತಿವಾದಿಗಳು ಭರಿಸುವ ಬಾಬ್ತು, 1ನೇ ಪ್ರತಿವಾದಿಯಾದ ರಾಜ್ಯ ಸರ್ಕಾರವು ಜವಾಬ್ದಾರಿ ನಿಗದಿಪಡಿಸಲು ನಿರ್ದೇಶಿಸಿರುತ್ತದೆ ಎಂದೂ ತಿಳಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 14 ಸಿಡಬ್ಲ್ಯೂಪಿ 2009, ಬೆಂಗಳೂರು, ದಿನಾಂಕ: 17ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಗೌರವ ಉಚ್ಚನಾಯಾಲಯವು ವಿಧಿಸಿರುವ ರೂ.10,000.00 (ಹತ್ತು ಸಾವಿರ ರೂಪಾಯಿ ಮಾತ್ರ)ಗಳು ವೆಚ್ಚದ ಬಾಬ್ತು ರಿಟ್ ಅರ್ಜಿಯಲ್ಲಿನ ಪ್ರತಿವಾದಿಗಳ ಪೈಕಿ 2ನೇ ಪ್ರತಿವಾದಿಯು ರೂ. 4,000.00, 3ನೇ ಪ್ರತಿವಾದಿಯು ರೂ.4,000.00 ಹಾಗೂ 5ನೇ ಪ್ರತಿವಾದಿಯು ರೂ.2,000.00ಗಳನ್ನು ಭರಿಸಲು ಆದೇಶಿಸಲಾಗಿದೆ. ಈ ವೆಚ್ಚವನ್ನು ಗೌರವ ಉಚ್ಚ ನ್ಯಾಯಾಲಯದಲ್ಲಿ ದಿನಾಂಕ: 20.03.2009ರ ಒಳಗಾಗಿ ಠೇವಣಿಸುವಂತೆ ಆದೇಶಿಸಿದೆ. ಈ ಸಂಬಂಧ ಸರ್ಕಾರಿ ವಕೀಲರಿಗೆ / ಸರ್ಕಾರಕ್ಕೆ ವರದಿ ಸಲ್ಲಿಸಲು ಅದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 994

**ಎನ್.ಸಿ. ಮುನಿಯಪ್ಪ**

ಕಾರ್ಯದರ್ಶಿ, ಸಹಕಾರ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಎನ್. ಶಿವೇಗೌಡ, ತಹಶೀಲ್ದಾರ್, ಗ್ರೇಡ್–2, ಪ್ರಸ್ತುತ ತಹಶೀಲ್ದಾರ್, ಮೂಡಗೆರೆ ತಾಲ್ಲೂಕು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಅಧಿಸೂಚನೆ ಸಂ: ಕಂಇ 110 ಎಎಸ್‌ಡಿ 2006, ದಿನಾಂಕ: 22.06.2006.
2. ಶ್ರೀ ಹೆಚ್.ಎನ್. ಶಿವೇಗೌಡ, ತಹಶೀಲ್ದಾರ್ ಇವರ ಮನವಿ ದಿನಾಂಕ: 17.02.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ:(1), ದಿನಾಂಕ: 22.06.2006ರ ಅಧಿಸೂಚನೆಯಲ್ಲಿ, ಶ್ರೀ ಹೆಚ್.ಎನ್. ಶಿವೇಗೌಡ, ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಸದರಿಯವರು ಈ ಹುದ್ದೆಗೆ, ಸೇರುವ ಪೂರ್ವದಲ್ಲಿ ಪೊಲೀಸ್ ಇಲಾಖೆಯಲ್ಲಿ, ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಗೆ ದಿನಾಂಕ: 10.10.1994ರಂದು ವರದಿ ಮಾಡಿಕೊಂಡಿರುತ್ತಾರೆ. ಸದರಿಯವರು ದಿನಾಂಕ: 10.10.1994 ರಿಂದ 30.06.2006ರವರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿ ಮೇಲೆ ಓದಲಾದ ಕ್ರ.ಸಂ.(2)ರ ಪ್ರಸ್ತಾವನೆಯಲ್ಲಿ, ಸದರಿಯವರು ಕಂದಾಯ ಇಲಾಖೆಯಲ್ಲಿ ಸೇವೆ ಪ್ರಾರಂಭಿಸುವ ಪೂರ್ವದಲ್ಲಿ ಪೊಲೀಸ್ ಇಲಾಖೆ, ಹಾಸನ ಜಿಲ್ಲೆಯಲ್ಲಿ, ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾ, ತದನಂತರ ಜಿಲ್ಲಾ ಪೊಲೀಸ್ ಕಛೇರಿ, ಹಾಸನ ಜಿಲ್ಲೆ ಇವರ ಜ್ಞಾಪನ ಸಂ: ಸಿಬ್ಬಂದಿ(2)/480/05–06, ದಿನಾಂಕ: 30.06.2006ರನ್ವಯ ಬಿಡುಗಡೆ ಹೊಂದಿರುವುದಾಗಿ ಆದ್ದರಿಂದ ಪೊಲೀಸ್ ಇಲಾಖೆಯಲ್ಲಿ ದಿನಾಂಕ: 10.10.1994 ರಿಂದ 30.06.2006ರವರೆಗೆ ಸೇವಾ ಅವಧಿಯನ್ನು ಪೂರೈಸಿದ್ದು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಶ್ರೀ ಹೆಚ್.ಎನ್. ಶಿವೇಗೌಡ, ತಹಶೀಲ್ದಾರ್ ಇವರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀಯುತರ ಮೂಲ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಶ್ರೀ ಹೆಚ್.ಎನ್. ಶಿವೇಗೌಡ, ತಹಶೀಲ್ದಾರ್, ಮೂಡಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರ ಈ ಹಿಂದೆ ಪೊಲೀಸ್ ಇಲಾಖೆಯಲ್ಲಿ, ಕಾನ್ಸ್‌ಟೇಬಲ್ ಆಗಿ ಸಲ್ಲಿಸಿದ್ದ ಸೇವೆ ದಿನಾಂಕ: 10.10.1994 ರಿಂದ 30.06.2006ರವರೆಗೆ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 67 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶೀ ಹೆಚ್.ಎನ್. ಶಿವೇಗೌಡ, ತಹಶೀಲ್ದಾರ್, ಮೂಡಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಪೊಲೀಸ್ ಇಲಾಖೆಯಲ್ಲಿ ಕಾನ್ಸ್‌ಟೇಬಲ್ ಆಗಿ ದಿನಾಂಕ: 10.10.1994 ರಿಂದ 30.06.2006ರವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಅವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ 7–8) ರವರ ಟಿಪ್ಪಣಿ ಸಂ: ಆಇ 1660 ವೆಚ್ಚ–7/2008, ದಿನಾಂಕ: 19.01.2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 995

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಔದ್ರಾಮ, ತಹಶೀಲ್ದಾರ್, ಗ್ರೇಡ್–2, ಪ್ರಸ್ತುತ ತಹಶೀಲ್ದಾರ್, ಗೋಕಾಕ್ ತಾಲ್ಲೂಕು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಕಂಇ 110 ಎಎಸ್‌ಡಿ 2006, ದಿನಾಂಕ: 22.06.2006.
2. ಶ್ರೀ ಔದ್ರಾಮ, ತಹಶೀಲ್ದಾರ್ ಇವರ ಮನವಿ ದಿನಾಂಕ: 20.12.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ:(1), ದಿನಾಂಕ: 22.06.2006ರ ಅಧಿಸೂಚನೆಯಲ್ಲಿ, ಶ್ರೀ ಔದ್ರಾಮ, ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಸದರಿಯವರು ಈ ಹುದ್ದೆಗೆ, ಸೇರುವ ಪೂರ್ವದಲ್ಲಿ ಪೊಲೀಸ್ ಇಲಾಖೆಯಲ್ಲಿ, ಆರಕ್ಷಕ ಉಪನಿರೀಕ್ಷಕರಾಗಿ (ಸಿವಿಲ್) ದಿನಾಂಕ: 23.02.2001 ರಿಂದ 25.06.2006ರವರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿ ಮೇಲೆ ಓದಲಾದ ಕ್ರ.ಸಂ:(2)ರಲ್ಲಿ ಶ್ರೀಯುತರು ಕಂದಾಯ ಇಲಾಖೆಯಲ್ಲಿ ಸೇವೆ ಪ್ರಾರಂಭಿಸುವ ಪೂರ್ವದಲ್ಲಿ ಡಿ.ಜಿ. ಮತ್ತು ಐ.ಜಿ.ಪಿ, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಆದೇಶ ಸಂ: 7/ಆರ್‌ಇಸಿಟಿ/99–2000, ದಿನಾಂಕ: 19.02.2001 ರಂತೆ ಆರಕ್ಷಕ ಉಪನಿರೀಕ್ಷಕ (ಸಿವಿಲ್) ರಾಗಿ ಬೆಳಗಾವಿ ಜಿಲ್ಲೆಯಲ್ಲಿ, ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ತದನಂತರ ದಿನಾಂಕ: 25.06.2006ರಂದು ಆರಕ್ಷಕಾಧೀಕ್ಷಕರು, ಬೆಳಗಾವಿ ಇವರ ಪತ್ರ ಸಂ: ಸಿಬ್ಬಂದಿ–1/177/2006–07, ದಿನಾಂಕ: 24.04.2007ರನ್ವಯ ಪೊಲೀಸ್ ಇಲಾಖೆಯಿಂದ ಬಿಡುಗಡೆ ಹೊಂದಿರುವುದಾಗಿ, ಆದ್ದರಿಂದ ಪೊಲೀಸ್ ಇಲಾಖೆಯಲ್ಲಿ ದಿನಾಂಕ: 23.02.2001 ರಿಂದ 25.06.2006ರವರೆಗಿನ ಸೇವಾ ಅವಧಿಯನ್ನು ಪೂರೈಸಿದ್ದು, ಹಿಂದಿನ ಸೇವೆಯನ್ನು ಪರಿಗಣಿಸವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಶ್ರೀ ಔದ್ರಾಮ, ತಹಶೀಲ್ದಾರ್ ಇವರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀಯುತರ ಮೂಲ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಶ್ರೀ ಔದ್ರಾಮ, ತಹಶೀಲ್ದಾರ್, ಗೋಕಾಕ್ ತಾಲ್ಲೂಕು, ಬೆಳಗಾಂ ಜಿಲ್ಲೆ ಇವರ ಈ ಹಿಂದೆ ಪೊಲೀಸ್ ಇಲಾಖೆಯಲ್ಲಿ, ಆರಕ್ಷಕ ಉಪನಿರೀಕ್ಷಕ (ಸಿವಿಲ್)ರಾಗಿ ಸಲ್ಲಿಸಿದ್ದ ಸೇವೆ ದಿನಾಂಕ: 23.02.2001 ರಿಂದ 25.06.2006ರವರೆಗಿನ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 43 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಔದ್ರಾಮ, ತಹಶೀಲ್ದಾರ್, ಗೋಕಾಕ್ ತಾಲ್ಲೂಕು, ಬೆಳಗಾವಿ ಜಿಲ್ಲೆ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಪೊಲೀಸ್ ಇಲಾಖೆಯಲ್ಲಿ ಆರಕ್ಷಕ ಉಪನಿರೀಕ್ಷಕ (ಸಿವಿಲ್) ದಿನಾಂಕ: 23.02.2001 ರಿಂದ 25.06.2006ರವರೆಗಿನ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಅವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ 7) ರವರ ಟಿಪ್ಪಣಿ ಸಂ: ಆಇ 1428 ವೆಚ್ಚ–7/2008, ದಿನಾಂಕ: 27.12.2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 996

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ವಿಜಯಕುಮಾರ್.ಎಂ.ಹೊನಕೇರಿ, ತಹಶೀಲ್ದಾರ್, ಗ್ರೇಡ್–2, ಪ್ರಸ್ತುತ ತಹಶೀಲ್ದಾರ್, ಯಲಬುರ್ಗಾ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಕಂಇ 8 ಎಟಿಎಸ್ 2006, ದಿನಾಂಕ: 15.04.2006.
2. ಶ್ರೀ ವಿಜಯಕುಮಾರ್.ಎಂ.ಹೊನಕೇರಿ, ತಹಶೀಲ್ಗಾರ್ ಇವರ ಮನವಿ ದಿನಾಂಕ: 27.11.2006.

**ಪ್ರಸ್ತಾವನೆ:**

ಶ್ರೀ ವಿಜಯಕುಮಾರ್.ಎಂ.ಹೊನಕೇರಿ, ತಹಶೀಲ್ದಾರ್ ಇವರು ಮೇಲೆ ಓದಲಾದ ದಿನಾಂಕ: 27.11.2006ರಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ ಸದರಿಯವರು ಹಿಂದೆ ಕಾರ್ಮಿಕ ಇಲಾಖೆಯಲ್ಲಿ ಕಾರ್ಮಿಕ ನಿರೀಕ್ಷಕರಾಗಿ ದಿನಾಂಕ: 19.07.2004 ರಿಂದ ದಿನಾಂಕ: 20.04.2006ರವರೆಗೆ ಸೇವೆ ಸಲ್ಲಿಸಿರುವುದರಿಂದ ಇವರ ಹಿಂದಿನ ಸೇವೆಯನ್ನು ನಿವೃತ್ತಿ ವೇತನದ ಸೌಲಭ್ಯಕ್ಕಾಗಿ ಪರಿಗಣಿಸುವಂತೆ ಕೋರಿರುತ್ತಾರೆ.

ಸದರಿ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀಯುತರ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಶ್ರೀಯುತರು ಕಾರ್ಮಿಕ ಇಲಾಖೆಯಲ್ಲಿ ಕಾರ್ಮಿಕ ನಿರೀಕ್ಷಕರಾಗಿ ಸಲ್ಲಿಸಿದ್ದ ದಿನಾಂಕ: 19.07.2004 ರಿಂದ 20.04.2006ರ ವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224–ಎ ರೀತ್ಯ ನಿವೃತ್ತ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 16 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ವಿಜಯಕುಮಾರ್.ಎಂ.ಹೊನಕೇರಿ, ಪ್ರಸ್ತುತ ತಹಶೀಲ್ದಾರ್, ಯಲಬುರ್ಗಾ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರು ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ಸೇರುವ ಪೂರ್ವದಲ್ಲಿ ಕಾರ್ಮಿಕ ಇಲಾಖೆಯಲ್ಲಿ ಕಾರ್ಮಿಕ ನಿರೀಕ್ಷಕರಾಗಿ ದಿನಾಂಕ: 19.07.2004 ರಿಂದ ದಿನಾಂಕ: 20.04.2006ರವರೆವಿಗೆ ಸಲ್ಲಿಸಲಾಗಿದ್ದ ಸೇವೆಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224–ಎ ರೀತ್ಯ ಅವರ ಪ್ರಸ್ತುತ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7) ರವರ ಟಿಪ್ಪಣಿ ಸಂ: ಆಇ 18 ವೆಚ್ಚ–7/2008, ದಿನಾಂಕ:13.2.2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 997

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಜಮಖಂಡಿ ಪಟ್ಟಣದ ಸ್ಥಳೀಯ ಯೋಜನೆ (ಪರಿಷ್ಕೃತ-1)ಗೆ ಸರ್ಕಾರದ ಅಂತಿಮ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ನಅಇ 113 ಬೆಮಪ್ರಾ 2007, ಬೆಂಗಳೂರು ದಿನಾಂಕ:07.06.2007.
2) ಜಮಖಂಡಿ ನಗರ ಯೋಜನಾ ಪ್ರಾಧಿಕಾರದ ಪತ್ರ ಸಂಖ್ಯೆ: ನಯೋಪ್ರಾ: ಜಮಾಪ್ಲಾ(ಪ-1): 07-08: 114 ದಿ.31.03.2008.
3) ದಿನಾಂಕ 28.04.2008 ರಂದು ಕಡತ ಸಂಖ್ಯೆ: ನಯೋ(6):ಉನಿ1:ಜಮಖಂಡಿಮ.ಯೋ(ಪ-1): ಅಂತಿಮ.ಅ:08ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರ ಸರ್ಕಾರಿ ಆದೇಶದಲ್ಲಿ ಜಮಖಂಡಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಜಮಖಂಡಿ ನಗರ ಯೋಜನಾ ಪ್ರಾಧಿಕಾರವು ಜಮಖಂಡಿ ಪಟ್ಟಣ ಸ್ಥಳೀಯ ಯೋಜನಾ ಪ್ರದೇಶಕ್ಕೆ ಮಹಾ ಯೋಜನೆ (ಪರಿಷ್ಕೃತ-1)ನ್ನು ತಯಾರಿಸಿ ಅಂತಿಮ ಅನುಮೋದನೆಯನ್ನು ಕೋರಿರುತ್ತಾರೆ.

ಮೇಲೆ ಓದಲಾದ (3)ರ ನಗರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ ಜಮಖಂಡಿ ಪಟ್ಟಣದ ಜನಸಂಖ್ಯೆಯು 2021ನೇ ಇಸವಿಗೆ 1,15,000ಗಳಷ್ಟು ಬೆಳವಣಿಗೆ ಆಗಬಹುದೆಂದು ಅಂದಾಜಿಸಿ ಮಹಾ ಯೋಜನೆಯನ್ನು (ಪರಿಷ್ಕೃತ-1) ತಯಾರಿಸಲಾಗಿದೆ. ಜಮಖಂಡಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ 2220 ಹೆಕ್ಟೇರ್ ಪ್ರದೇಶದಲ್ಲಿ 1320 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರ ಕಲಂ 12 ರಲ್ಲಿನ ಅಂಶಗಳನ್ನು ಪರಿಗಣಿಸಿ, ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ 1320 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 686.00 ಹೆಕ್ಟೇರ್ (ಶೇ.53.60) ವಾಣಿಜ್ಯಕ್ಕಾಗಿ 66.00 ಹೆಕ್ಟೇರ್ (ಶೇ.05.15), ಕೈಗಾರಿಕೆಗಾಗಿ 39.60 ಹೆಕ್ಟೇರ್ (ಶೇ.03.09), ಸಾರ್ವಜನಿಕ: ಅರೆಸಾರ್ವಜನಿಕ ಉಪಯೋಗಕ್ಕೆ 129.99 ಹೆಕ್ಟೇರ್ (ಶೇ.10.16), ನಾಗರೀಕ ಸೌಲಭ್ಯಕ್ಕಾಗಿ 2.01 ಹೆಕ್ಟೇರ್ (ಶೇ.0.15) ಉದ್ಯಾನವನ:ಬಯಲು ಜಾಗಗಳಿಗೆ 132.00ಹೆಕ್ಟೇರ್ (ಶೇ.10.31), ಹಾಗೂ ಸಾರಿಗೆ ಮತ್ತು ಸಂಪರ್ಕಕ್ಕಾಗಿ 224.40 ಹೆಕ್ಟೇರ್ (ಶೇ.17.54) ಪ್ರದೇಶವನ್ನು ನಿಗಧಿಪಡಿಸಲಾಗಿದೆ. ಮಹಾ ಯೋಜನೆಯನ್ನು (ಪರಿಷ್ಕೃತ-1) ಅನುಷ್ಠಾನಗೊಳಿಸಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರ ಕಲಂ 13(3)ರ ಪ್ರಕಾರ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 113 ಬೆಂರೂಪ್ರಾ 2007, ಬೆಂಗಳೂರು ದಿನಾಂಕ: 21ನೇ ಜುಲೈ 2008**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಜಮಖಂಡಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆಗೆ (ಪರಿಷ್ಕೃತ-1) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರ ಕಲಂ 13(3)ರನ್ವಯ ಸರ್ಕಾರದ ಅಂತಿಮ ಅನುಮೋದನೆ ನೀಡಲಾಗಿದೆ.

ಮಹಾಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ:** ಶಿವಮೊಗ್ಗ ಜಿಲ್ಲೆ ಸಾಗರ ಪಟ್ಟಣದ ಮಹಾ ಯೋಜನೆಗೆ ಸರ್ಕಾರದ ಅಂತಿಮ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ನಅಇ 113 ಬೆಂರೂಪ್ರಾ 2004 ಬೆಂಗಳೂರು ದಿನಾಂಕ:04.07.2005.
2) ಸಾಗರ ಪುರಸಭೆ:ಯೋಜನಾ ಪ್ರಾಧಿಕಾರ ಪತ್ರ ಸಂ: ನಗರಸಭೆ:ಸಾಗರ:ಯೋಪ್ರಾ:ಮ.ಯೋ: 2007-08 ದಿನಾಂಕ:31.03.2008.
3) ದಿನಾಂಕ 02.06.2008 ರಂದು ಕಡತ ಸಂಖ್ಯೆ: ನಯೋ(14):ಉನಿ(ಕೆಂ.ಕಾ):ಸಾಗರ.ಮ.ಯೋ.ಅ: 08-09 ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರ ಆದೇಶದಲ್ಲಿ ಶಿವಮೊಗ್ಗ ಜಿಲ್ಲೆ ಸಾಗರ ಪಟ್ಟಣದ ಮಹಾ ಯೋಜನೆಗೆ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಸಾಗರ ಯೋಜನಾ ಪ್ರಾಧಿಕಾರವು ಶಿವಮೊಗ್ಗ ಜಿಲ್ಲೆ ಸಾಗರ ಪಟ್ಟಣದ ಮಹಾ ಯೋಜನೆಯನ್ನು ತಯಾರಿಸಿ ಅಂತಿಮ ಅನುಮೋದನೆಯನ್ನು ಕೋರಿರುತ್ತಾರೆ.

ಮೇಲೆ ಓದಲಾದ (3)ರ ನಗರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ ಸಾಗರ ಪಟ್ಟಣದ ಜನಸಂಖ್ಯೆಯು 2021 ನೇ ಇಸವಿಗೆ 85,000 ಗಳಷ್ಟು ಬೆಳವಣಿಗೆ ಆಗಬಹುದೆಂದು ಅಂದಾಜಿಸಿ ಮಹಾ ಯೋಜನೆಯನ್ನು ತಯಾರಿಸಲಾಗಿದೆ. ಸಾಗರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ವಿಸ್ತೀರ್ಣವು 17.40 ಚ.ಕಿ.ಮೀ.ಹಾಗೂ ಪ್ರಸ್ತಾಪಿತ ನಗರೀಕರಣದ ವಿಸ್ತೀರ್ಣವು 13.18 ಚ.ಕಿ.ಮೀ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರ ಕಲಂ (12) ರಲ್ಲಿನ ಅಂಶಗಳನ್ನು ಪರಿಗಣಿಸಿ, ನಗರದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಮಹಾಯೋಜನೆಯನ್ನು ಅನುಷ್ಠಾನಗೊಳಿಸಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರ ಕಲಂ 13(3)ರ ಪ್ರಕಾರ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 80 ಬೆಂರೂಪ್ರಾ 2008, ಬೆಂಗಳೂರು ದಿನಾಂಕ: 21ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶಿವಮೊಗ್ಗ ಜಿಲ್ಲೆ ಸಾಗರ ಪಟ್ಟಣದ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರ ಕಲಂ 13(3)ರನ್ವಯ ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಅಂತಿಮ ಅನುಮೋದನೆ ನೀಡಲಾಗಿದೆ.

"ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ.69(1)ರನ್ವಯ ನಿಗದಿತ ಅವದಿಯೊಳಗೆ ಕ್ರಮ ಕೈಗೊಳ್ಳತಕ್ಕದ್ದು"

ಮಹಾಯೋಜನೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1106

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ:** ಮೈಸೂರು ನಗರ, ಚಾಮುಂಡಿ ವಿಹಾರ ಬಡಾವಣೆ, ನಿವೇಶನ ಸಂಖ್ಯೆ: old 670/25-A4-N-28/25A4, old 670/25-A3-N-28/25A3,old670/25-A1-N-28/25A1ರ ವಿಸ್ತೀರ್ಣ 2322.37 ಚ.ಮೀ. ನಿವೇಶನವನ್ನು ವಸತಿ ವಲಯದಿಂದ ವಾಣಿಜ್ಯ (ವಾಣಿಜ್ಯ ಸಂಕೀರ್ಣ ಹಾಗೂ ಹೋಟೆಲ್ ಉದ್ದೇಶಕ್ಕೆ) ವಲಯಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಕೋರಿರುವ ಬಗ್ಗೆ.

**ಓದಲಾಗಿದೆ:**
1) ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ:ಮೈನಪ್ರಾ:ನಯೋ:ಸಭೆ: 90:08–09 ದಿನಾಂಕ:02–08–2008.
2) ದಿ:16.10.08ರಂದು ಕಡತ ಸಂಖ್ಯೆ: ನಯೋ:ಉನಿ:ಭೂಉಬ:110:ಚಾಮುಂಡಿವಿಹಾರ:2008–09 ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರು ಮೈಸೂರು ನಗರ, ಚಾಮುಂಡಿ ವಿಹಾರ ಬಡಾವಣೆ, ನಿವೇಶನ ಸಂಖ್ಯೆ: old 670/25-A4-N-28/25A4, old 670/25-A3-N-28/25A3, old 670/25-A1-N-28/25A1ರ ವಿಸ್ತೀರ್ಣ 2322.37 ಚ.ಮೀ. ನಿವೇಶನವನ್ನು ವಸತಿ ವಲಯದಿಂದ ವಾಣಿಜ್ಯ (ವಾಣಿಜ್ಯ ಸಂಕೀರ್ಣ ಹಾಗೂ ಹೋಟೆಲ್ ಉದ್ದೇಶಕ್ಕೆ) ವಲಯಕ್ಕೆ ಭೂ ಉಪಯೋಗ ಬದಲಾಯಿಸುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 748 ಮೈಅಪ್ರಾ 2008, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಮೈಸೂರು ನಗರ, ಚಾಮುಂಡಿ ವಿಹಾರ ಬಡಾವಣೆ, ನಿವೇಶನ ಸಂಖ್ಯೆ: old 670/25-A4-N-

28/25A4, old 670/25-A3-N-28/25A3, old670/25-A1-N-28/25A1ರ ವಿಸ್ತೀರ್ಣ 2322.37 ಚ.ಮೀ. ನಿವೇಶನವನ್ನು ವಸತಿ ವಲಯದಿಂದ ವಾಣಿಜ್ಯ (ವಾಣಿಜ್ಯ ಸಂಕೀರ್ಣ ಹಾಗೂ ಹೋಟೆಲ್ ಉದ್ದೇಶಕ್ಕೆ) ವಲಯಕ್ಕೆ ಉದ್ದೇಶಕ್ಕೆ ಬದಲಾವಣೆ ಮಾಡಲು ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

೧. ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆಗೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 18ರನ್ವಯ ಶಾಸನಬದ್ಧ ಶುಲ್ಕವನ್ನು ಅರ್ಜಿದಾರರು ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.

೨. ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು.

೩. ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಾಣಿಜ್ಯ (ವಾಣಿಜ್ಯ ಸಂಕೀರ್ಣ ಹಾಗೂ ಹೋಟೆಲ್ ಉದ್ದೇಶಕ್ಕೆ) ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.

೪. ಮಾಸ್ಟರ್‌ಪ್ಲಾನ್ ಪರಿಷ್ಕರಣೆ ಸಂದರ್ಭದಲ್ಲಿ ಯೋಜನೆಯಲ್ಲಿ ಅಳವಡಿಸಬಹುದಾದ ಉದ್ದೇಶಿತ ರಸ್ತೆ ಪರಿಚಲನೆಗೆ ಬೇಕಾಗುವ ಅಗತ್ಯ ಜಮೀನನ್ನು ಬಿಟ್ಟುಕೊಡತಕ್ಕದ್ದು.

೫. ಪ್ರಸ್ತಾವಿತ ವಾಣಿಜ್ಯ ಸಂಕೀರ್ಣದಲ್ಲಿ ವಾಹನ ನಿಲುಗಡೆಗೆ ಅಗತ್ಯ ಸೌಲಭ್ಯವನ್ನು ಕಲ್ಪಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.174

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ವಿಷಯ:** ಮೈಸೂರು ನಗರ, ದಟ್ಟಗಳ್ಳಿ, 3ನೇ ಹಂತ ಬಡಾವಣೆಯ ನಿವೇಶನ ಸಂಖ್ಯೆ 692ರ ವಿಸ್ತೀರ್ಣ 379.40 ಚ.ಮೀ. ನಿವೇಶನವನ್ನು ವಸತಿ ವಲಯದಿಂದ ವಾಣಿಜ್ಯ (ಬ್ಯಾಂಕ್ ಕಟ್ಟಡ) ವಲಯಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಕೋರಿರುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ: ಮೈನಪ್ರಾ:ನಯೋ:ಸಭೆ: 95:08–09 ದಿನಾಂಕ:31–07–2008.

2) ದಿ:04.11.2008ರಂದು ಕಡತ ಸಂಖ್ಯೆ: ನಯೋ:ಉನಿ: ಭೂಉಬ:136:ದಟ್ಟಗಳ್ಳಿ:2008–09.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು, ಇವರು ಮೈಸೂರು ನಗರ, ದಟ್ಟಗಳ್ಳಿ, 3ನೇ ಹಂತ ಬಡಾವಣೆಯ ನಿವೇಶನ ಸಂಖ್ಯೆ 692ರ ವಿಸ್ತೀರ್ಣ 379.40 ಚ.ಮೀ. ನಿವೇಶನವನ್ನು ವಸತಿ ವಲಯದಿಂದ ವಾಣಿಜ್ಯ (ಬ್ಯಾಂಕ್ ಕಟ್ಟಡ) ವಲಯಕ್ಕೆ ಭೂ ಉಪಯೋಗ ಬದಲಾವಣೆ ಮಾಡುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 777 ಮೈಅಪ್ರಾ 2008, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಮೈಸೂರು ನಗರ, ದಟ್ಟಗಳ್ಳಿ, 3ನೇ ಹಂತ ಬಡಾವಣೆಯ ನಿವೇಶನ ಸಂಖ್ಯೆ 692ರ ವಿಸ್ತೀರ್ಣ 379.40 ಚ.ಮೀ. ನಿವೇಶನವನ್ನು ವಸತಿ ವಲಯದಿಂದ ವಾಣಿಜ್ಯ (ಬ್ಯಾಂಕ್ ಕಟ್ಟಡ) ವಲಯಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

೧. ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 18ರನ್ವಯ ಶಾಸನಬದ್ಧ ಶುಲ್ಕವನ್ನು ಅರ್ಜಿದಾರರು ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.

೨. ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು.

೩. ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಾಣಿಜ್ಯ (ಬ್ಯಾಂಕ್ ಕಟ್ಟಡ) ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.

೪. ಮಾಸ್ಟರ್ ಪ್ಲಾನ್ ಪರಿಷ್ಕರಣೆ ಸಂದರ್ಭದಲ್ಲಿ ಯೋಜನೆಯಲ್ಲಿ ಅಳವಡಿಸಬಹುದಾದ ಉದ್ದೇಶಿತ ರಸ್ತೆ ಪರಿಚಲನೆಗೆ ಬೇಕಾಗುವ ಅಗತ್ಯ ಜಮೀನನ್ನು ಬಿಟ್ಟುಕೊಡತಕ್ಕದ್ದು.

೫. ಪ್ರಸ್ತಾವಿತ ಬ್ಯಾಂಕ್ ಕಟ್ಟಡದಲ್ಲಿ ವಾಹನ ನಿಲುಗಡೆಗೆ ಅಗತ್ಯ ಸೌಲಭ್ಯವನ್ನು ಕಲ್ಪಿಸಿಕೊಳ್ಳತಕ್ಕದ್ದು.

೬. ಅರ್ಜಿದಾರರೇ ಸದರಿ ಜಮೀನಿನಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.176

**ಸಿ.ಟಿ.ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ವಿಷಯ :** ಮೈಸೂರು ನಗರ, ಗೋಕುಲಂ, 3ನೇ ಹಂತ, ನಿವೇಶನ ಸಂಖ್ಯೆ 379ರ ವಿಸ್ತೀರ್ಣ 289.85 ಚ.ಮೀ. ನಿವೇಶನವನ್ನು ವಸತಿ ವಲಯದಿಂದ ವಾಣಿಜ್ಯ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಕೋರಿರುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ:ಮೈನಪ್ರಾ:ನಯೋ:ಸಭೆ: 76:08–09 ದಿನಾಂಕ:24–10–2008.

2) ದಿ:06.12.2008ರಂದು ಕಡತ ಸಂಖ್ಯೆ:ನಯೋ:ಉನಿ: ಭೂಉಬ:ಗೋಕುಲಂ:248:2008–09 ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ನಗರ, ಗೋಕುಲಂ, 3ನೇ ಹಂತ, ನಿವೇಶನ ಸಂಖ್ಯೆ 379ರ ವಿಸ್ತೀರ್ಣ 289.85 ಚ.ಮೀ. ನಿವೇಶನವನ್ನು ವಸತಿ ವಲಯದಿಂದ ವಾಣಿಜ್ಯ ಉದ್ದೇಶಕ್ಕೆ ಭೂ ಉಪಯೋಗ ಬದಲಾಯಿಸುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 850 ಮೈಅಪ್ರಾ 2008, ಬೆಂಗಳೂರು, ದಿನಾಂಕ: 13ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಮೈಸೂರು ನಗರ, ಗೋಕುಲಂ, 3ನೇ ಹಂತ, ನಿವೇಶನ ಸಂಖ್ಯೆ 379ರ ವಿಸ್ತೀರ್ಣ 289.85 ಚ.ಮೀ. ನಿವೇಶನವನ್ನು ವಸತಿ ವಲಯದಿಂದ ವಾಣಿಜ್ಯ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 18ರನ್ವಯ ಶಾಸನಬದ್ದ ಶುಲ್ಕವನ್ನು ಅರ್ಜಿದಾರರು ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.
2. ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು.
3. ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಾಣಿಜ್ಯ ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.
4. ಮಾಸ್ಟರ್‌ಪ್ಲಾನ್ ಪರಿಷ್ಕರಣೆ ಸಂದರ್ಭದಲ್ಲಿ ಯೋಜನೆಯಲ್ಲಿ ಅಳವಡಿಸಬಹುದಾದ ಉದ್ದೇಶಿತ ರಸ್ತೆ ಪರಿಚಲನೆಗೆ ಬೇಕಾಗುವ ಅಗತ್ಯ ಜಮೀನನ್ನು ಬಿಟ್ಟುಕೊಡತಕ್ಕದ್ದು.
5. ಪ್ರಸ್ತಾವಿತ ವಾಣಿಜ್ಯ ಕಟ್ಟಡದಲ್ಲಿ ವಾಹನ ನಿಲುಗಡೆಗೆ ಅಗತ್ಯ ಸೌಲಭ್ಯವನ್ನು ಕಲ್ಪಿಸಿಕೊಳ್ಳತಕ್ಕದ್ದು.
6. ಅರ್ಜಿದಾರರೇ ಸದರಿ ಜಮೀನಿನಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.466

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ:** ಮೈಸೂರು ತಾಲ್ಲೂಕು ಹಂಚ್ಯಾ ಗ್ರಾಮದ ಮೋಜಣಿ ಸಂಖ್ಯೆ: 104/2 (238ರ) ವಿಸ್ತೀರ್ಣ 05 ಎಕರೆ 05 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಕೋರಿರುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ: ಮೈನಪ್ರಾ:ನಯೋ: ಸಭೆ:176:08–09 ದಿನಾಂಕ:02–08–2008.

2) ದಿ: 08.12.08ರಂದು ಕಡತ ಸಂಖ್ಯೆ:ನಯೋ:ಉನಿ:ಭೂಉಬ:ಹಂಚ್ಯಾ:82: 08–09 ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರು ಮೈಸೂರು ತಾಲ್ಲೂಕು ಹಂಚ್ಯಾ ಗ್ರಾಮದ ಮೋಜಣಿ ಸಂಖ್ಯೆ:104/2 (238ರ) ವಿಸ್ತೀರ್ಣ 05 ಎಕರೆ 05 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 851 ಮೈಅಪ್ರಾ 2008, ಬೆಂಗಳೂರು, ದಿನಾಂಕ: 12ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಮೈಸೂರು ತಾಲ್ಲೂಕು ಹಂಚ್ಯಾ ಗ್ರಾಮದ ಮೋಜಣಿ ಸಂಖ್ಯೆ:104/2 (238ರ) ವಿಸ್ತೀರ್ಣ 05 ಎಕರೆ 05 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆಗೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 18ರನ್ವಯ ಶಾಸನಬದ್ಧ ಶುಲ್ಕವನ್ನು ಅರ್ಜಿದಾರರು ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.
2. ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು.
3. ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಸತಿ ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.
4. ಮಾಸ್ಟರ್‌ಪ್ಲಾನ್ ಪರಿಷ್ಕರಣೆ ಸಂದರ್ಭದಲ್ಲಿ ಯೋಜನೆಯಲ್ಲಿ ಅಳವಡಿಸಬಹುದಾದ ಉದ್ದೇಶಿತ ರಸ್ತೆ ಪರಿಚಲನೆಗೆ ಬೇಕಾಗುವ ಅಗತ್ಯ ಜಮೀನನ್ನು ಬಿಟ್ಟುಕೊಡತಕ್ಕದ್ದು.
5. ಅರ್ಜಿದಾರರೇ ಸದರಿ ಜಮೀನಿನಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಳ್ಳತಕ್ಕದ್ದು.
6. ಸದರಿ ಜಮೀನಿನಲ್ಲಿ ಮಳೆ ನೀರು ಸಂಗ್ರಹಣೆ ತೊಟ್ಟಿ (Rain water harvesting storage) ವ್ಯವಸ್ಥೆಯನ್ನು ಅರ್ಜಿದಾರರೇ ರೂಪಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.467

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ:** ಮೈಸೂರು ತಾಲ್ಲೂಕು ಕಸಬಾ ಹೋಬಳಿ, ಹೆಬ್ಬಾಳು ಗ್ರಾಮದ ಮೋಜಣಿ ಸಂಖ್ಯೆ 98/ಎರ 01ಎ–25ಗು, 98/ಸಿರ 01ಎ–25ಗು, 98/ಡಿರ 01ಎ–28ಗು, 98/ಇರ 01ಎ–27ಗು ಮತ್ತು 98/ಎಫ್‌ರ 01ಎ–26ಗು ಒಟ್ಟು ವಿಸ್ತೀರ್ಣ 08 ಎಕರೆ 11 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಕೋರಿರುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ:ಮೈನಪ್ರಾ:ನಯೋ:ಸಭೆ: 168:08-09 ದಿನಾಂಕ:05-08-2008.

2) ದಿ:04.11.08ರಂದು ಕಡತ ಸಂಖ್ಯೆ:ನಯೋ:ಉನಿ: ಭೂಉಬ:ಹೆಬ್ಬಾಳು:26: 08-09ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರು ಮೈಸೂರು ತಾಲ್ಲೂಕು ಕಸಬಾ ಹೋಬಳಿ, ಹೆಬ್ಬಾಳು ಗ್ರಾಮದ ಮೋಜಣಿ ಸಂಖ್ಯೆ 98/ಎರ 01ಎ-25ಗು, 98/ಸಿರ 01ಎ-25ಗು, 98/ಡಿರ 01ಎ-28ಗು, 98/ಇರ 01ಎ-27ಗು ಮತ್ತು 98/ಎಫ್ ರ 01ಎ-26ಗು ಒಟ್ಟು ವಿಸ್ತೀರ್ಣ 08 ಎಕರೆ 11 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾಯಿಸುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 778 ಮೈಅಪ್ರಾ 2008, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಮೈಸೂರು ತಾಲ್ಲೂಕು ಕಸಬಾ ಹೋಬಳಿ, ಹೆಬ್ಬಾಳು ಗ್ರಾಮದ ಮೋಜಣಿ ಸಂಖ್ಯೆ 98/ಎರ 01ಎ-25ಗು, 98/ಸಿರ 01ಎ-25ಗು, 98/ಡಿರ 01ಎ-28ಗು, 98/ಇರ 01ಎ-27ಗು ಮತ್ತು 98/ಎಫ್‌ರ 01ಎ-26ಗು ಒಟ್ಟು ವಿಸ್ತೀರ್ಣ 08 ಎಕರೆ 11 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 18ರನ್ವಯ ಶಾಸನಬದ್ಧ ಶುಲ್ಕವನ್ನು ಅರ್ಜಿದಾರರು ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.
2. ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು.
3. ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಸತಿ ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.
4. ಮಾಸ್ಟರ್‌ಪ್ಲಾನ್ ಪರಿಷ್ಕರಣೆ ಸಂದರ್ಭದಲ್ಲಿ ಯೋಜನೆಯಲ್ಲಿ ಅಳವಡಿಸಬಹುದಾದ ಉದ್ದೇಶಿತ ರಸ್ತೆ ಪರಿಚಲನೆಗೆ ಬೇಕಾಗುವ ಅಗತ್ಯ ಜಮೀನನ್ನು ಬಿಟ್ಟುಕೊಡತಕ್ಕದ್ದು.
5. ಪ್ರಸ್ತಾವಿತ ಜಮೀನು ನೈಸರ್ಗಿಕವಾಗಿ ಹರಿಯುವ ನಾಲಾ ಅಥವಾ ಹಳ್ಳಕ್ಕೆ ಸಮೀಪವಿದ್ದಲ್ಲಿ ಅಥವಾ ಕೆರೆಗೆ ಸಮೀಪವಿದ್ದಲ್ಲಿ ಭೂ ಅಭಿವೃದ್ಧಿ ಪಡಿಸುವ ಮುನ್ನ ಮಾಲಿನ್ಯ ಇಲಾಖೆಯಿಂದ ನಿರಾಕ್ಷೇಪಣಾ ಪತ್ರ ಪಡೆದುಕೊಳ್ಳತಕ್ಕದ್ದು.
6. ಸದರಿ ಜಮೀನಿನಲ್ಲಿ ಮಳೆ ನೀರು ಸಂಗ್ರಹಣೆ ತೊಟ್ಟಿ (Rain Water harvesting storage) ವ್ಯವಸ್ಥೆಯನ್ನ ಅರ್ಜಿದಾರರೇ ರೂಪಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 177

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ವಿಷಯ:** ಮೈಸೂರು ತಾಲ್ಲೂಕು ಇಲವಾಲ ಹೋಬಳಿ, ಇಲವಾಲ ಗ್ರಾಮದ ಮೋಜಣಿ ಸಂಖ್ಯೆ 21/1ರ ಪೈಕಿ 13 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಕೋರಿರುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ:ಮೈನಪ್ರಾ:ನಯೋ:ಸಭೆ: 127:08-09 ದಿನಾಂಕ:10-11-2008.

2) ದಿ:11.12.2008ರಂದು ಕಡತ ಸಂಖ್ಯೆ:ನಯೋ:ಉನಿ:ಭೂಉಬ:ಇಲವಾಲ:258:2008-09 ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರು ಮೈಸೂರು ತಾಲ್ಲೂಕು ಇಲವಾಲ ಹೋಬಳಿ, ಇಲವಾಲ ಗ್ರಾಮದ ಮೋಜಣಿ ಸಂಖ್ಯೆ 21/1ರ ಪೈಕಿ 13 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾಯಿಸುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 845 ಮೈಅಪ್ರಾ 2008, ಬೆಂಗಳೂರು, ದಿನಾಂಕ: 13ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಮೈಸೂರು ತಾಲ್ಲೂಕು ಇಲವಾಲ ಹೋಬಳಿ, ಇಲವಾಲ ಗ್ರಾಮದ ಮೋಜಣಿ ಸಂಖ್ಯೆ 21/1ರ ಪೈಕಿ 13 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 18ರನ್ವಯ ಶಾಸನಬದ್ದ ಶುಲ್ಕವನ್ನು ಅರ್ಜಿದಾರರು ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.
2. ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು.
3. ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಸತಿ ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.
4. ಮಾಸ್ಟರ್‌ಪ್ಲಾನ್ ಪರಿಷ್ಕರಣೆ ಸಂದರ್ಭದಲ್ಲಿ ಯೋಜನೆಯಲ್ಲಿ ಅಳವಡಿಸಬಹುದಾದ ಉದ್ದೇಶಿತ ರಸ್ತೆ ಪರಿಚಲನೆಗೆ ಬೇಕಾಗುವ ಅಗತ್ಯ ಜಮೀನನ್ನು ಬಿಟ್ಟುಕೊಡತಕ್ಕದ್ದು.
5. ಅರ್ಜಿದಾರರೇ ಸದರಿ ಜಮೀನಿನಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಳ್ಳತಕ್ಕದ್ದು.
6. ಸದರಿ ಜಮೀನಿನಲ್ಲಿ ಮಳೆ ನೀರು ಸಂಗ್ರಹಣೆ ತೊಟ್ಟಿ (Rain water harvesting storage) ವ್ಯವಸ್ಥೆಯನ್ನು ಅರ್ಜಿದಾರರೇ ರೂಪಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 464

**ಸಿ.ಟಿ.ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ:** ಮೈಸೂರು ತಾಲ್ಲೂಕು ಇಲವಾಲ ಹೋಬಳಿ, ಹುಯಿಲಾಳು ಗ್ರಾಮದ ಮೋಜಣಿ ಸಂಖ್ಯೆ 43:2ರ 03 ಎಕರೆ 36ಗುಂಟೆ ವಿಸ್ತೀರ್ಣದ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಕೋರಿರುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ:ಮೈನಪ್ರಾ:ನಯೋ:ಸಭೆ: 128: 08–09 ದಿನಾಂಕ:12–11–2008.

2) ದಿ: 27.12.08ರಂದು ಕಡತ ಸಂಖ್ಯೆ:ನಯೋ:ಭೂಉಬ ಹುಯಿಲಾಳು:343:2008–09ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರು ಮೈಸೂರು ತಾಲ್ಲೂಕು ಇಲವಾಲ ಹೋಬಳಿ, ಹುಯಿಲಾಳು ಗ್ರಾಮದ ಮೋಜಣಿ ಸಂಖ್ಯೆ 43:2ರ 03 ಎಕರೆ 36ಗುಂಟೆ ವಿಸ್ತೀರ್ಣದ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾಯಿಸುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 6 ಮೈಅಪ್ರಾ 2009, ಬೆಂಗಳೂರು, ದಿನಾಂಕ: 13ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಮೈಸೂರು ತಾಲ್ಲೂಕು ಇಲವಾಲ ಹೋಬಳಿ, ಹುಯಿಲಾಳು ಗ್ರಾಮದ ಮೋಜಣಿ ಸಂಖ್ಯೆ 43:2ರ 03 ಎಕರೆ 36ಗುಂಟೆ ವಿಸ್ತೀರ್ಣದ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 18ರನ್ವಯ ಶಾಸನಬದ್ಧ ಶುಲ್ಕವನ್ನು ಅರ್ಜಿದಾರರು ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.
2. ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು.
3. ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಸತಿ ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.
4. ಮಾಸ್ಟರ್‌ಪ್ಲಾನ್ ಪರಿಷ್ಕರಣೆ ಸಂದರ್ಭದಲ್ಲಿ ಯೋಜನೆಯಲ್ಲಿ ಅಳವಡಿಸಬಹುದಾದ ಉದ್ದೇಶಿತ ರಸ್ತೆ ಪರಿಚಲನೆಗೆ ಬೇಕಾಗುವ ಅಗತ್ಯ ಜಮೀನನ್ನು ಬಿಟ್ಟುಕೊಡತಕ್ಕದ್ದು.
5. ಅರ್ಜಿದಾರರೇ ಸದರಿ ಜಮೀನಿನಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಳ್ಳತಕ್ಕದ್ದು.
6. ಸದರಿ ಜಮೀನಿನಲ್ಲಿ ಮಳೆ ನೀರು ಸಂಗ್ರಹಣೆ ತೊಟ್ಟಿ (Rain water harvesting storage) ವ್ಯವಸ್ಥೆಯನ್ನು ಅರ್ಜಿದಾರರೇ ರೂಪಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.463

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ:** ಮೈಸೂರು ತಾಲ್ಲೂಕು ಕಸಬಾ ಹೋಬಳಿ, ಸಿದ್ದಲಿಂಗಪುರ ಗ್ರಾಮದ ಮೋಜಣಿ ಸಂಖ್ಯೆ 60/3ರ ವಿಸ್ತೀರ್ಣ 33 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಕೋರಿರುವ ಬಗ್ಗೆ.

**ಓದಲಾಗಿದೆ:**
1) ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ:ಮೈನಪ್ರಾ:ನಯೋ:ಸಭೆ: 169: 08–09 ದಿನಾಂಕ:25–10–2008.
2) ದಿ:11.12.08ರಂದು ಕಡತ ಸಂಖ್ಯೆ:ನಯೋ:ಉನಿ: ಭೂಉಬ:ಸಿದ್ದಲಿಂಗಪುರ:219: 2008–09ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರು ಮೈಸೂರು ತಾಲ್ಲೂಕು ಕಸಬಾ ಹೋಬಳಿ, ಸಿದ್ದಲಿಂಗಪುರ ಗ್ರಾಮದ ಮೋಜಣಿ ಸಂಖ್ಯೆ 60/3ರ ವಿಸ್ತೀರ್ಣ 33 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾಯಿಸುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 846 ಮೈಅಪ್ರಾ 2008, ಬೆಂಗಳೂರು, ದಿನಾಂಕ: 12ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಮೈಸೂರು ತಾಲ್ಲೂಕು ಕಸಬಾ ಹೋಬಳಿ, ಸಿದ್ದಲಿಂಗಪುರ ಗ್ರಾಮದ ಮೋಜಣಿ ಸಂಖ್ಯೆ 60/3ರ ವಿಸ್ತೀರ್ಣ 33 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಪ್ರಕರಣ 18ರನ್ವಯ ಶಾಸನಬದ್ದ ಶುಲ್ಕವನ್ನು ಅರ್ಜಿದಾರರು ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.
2. ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು.
3. ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಸತಿ ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.
4. ಮಾಸ್ಟರ್‌ಪ್ಲಾನ್ ಪರಿಷ್ಕರಣೆ ಸಂದರ್ಭದಲ್ಲಿ ಯೋಜನೆಯಲ್ಲಿ ಅಳವಡಿಸಬಹುದಾದ ಉದ್ದೇಶಿತ ರಸ್ತೆ ಪರಿಚಲನೆಗೆ ಬೇಕಾಗುವ ಅಗತ್ಯ ಜಮೀನನ್ನು ಬಿಟ್ಟುಕೊಡತಕ್ಕದ್ದು.
5. ಅರ್ಜಿದಾರರೇ ಸದರಿ ಜಮೀನಿನಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಳ್ಳತಕ್ಕದ್ದು.
6. ಸದರಿ ಜಮೀನಿನಲ್ಲಿ ಮಳೆ ನೀರು ಸಂಗ್ರಹಣೆ ತೊಟ್ಟಿ (Rain water harvesting storage) ವ್ಯವಸ್ಥೆಯನ್ನು ಅರ್ಜಿದಾರರೇ ರೂಪಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.465

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ:** ಮೈಸೂರು ತಾಲ್ಲೂಕು ವಾಜಮಂಗಲ ಗ್ರಾಮದ ಮೋಜಣಿ ಸಂಖ್ಯೆ 68/1–2ಬಿ ಮತ್ತು 63/2ರಲ್ಲಿನ 02 ಎಕರೆ 27 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಕೋರಿರುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ:ಮೈನಪ್ರಾ:ನಯೋ:ಸಭೆ: 82:07–08 ದಿನಾಂಕ:30–06–2008.

2) ದಿ:18.12.08ರಂದು ಕಡತ ಸಂಖ್ಯೆ: ನಯೋ:ಉನಿ: ಭೂಉಬ:ವಾಜಮಂಗಲ:271: 2008–09ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರು ಮೈಸೂರು ತಾಲ್ಲೂಕು ವಾಜಮಂಗಲ ಗ್ರಾಮದ ಮೋಜಣಿ ಸಂಖ್ಯೆ 68/1–2ಬಿ ಮತ್ತು 63/2ರಲ್ಲಿನ 02 ಎಕರೆ 27 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾಯಿಸುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 869 ಮೈಅಪ್ರಾ 2008, ಬೆಂಗಳೂರು, ದಿನಾಂಕ: 6ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಮೈಸೂರು ತಾಲ್ಲೂಕು ವಾಜಮಂಗಲ ಗ್ರಾಮದ ಮೋಜಣಿ ಸಂಖ್ಯೆ 68/1–2ಬಿ ಮತ್ತು 63/2ರಲ್ಲಿನ 02 ಎಕರೆ 27 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಪ್ರಕರಣ 18ರನ್ವಯ ಶಾಸನಬದ್ದ ಶುಲ್ಕವನ್ನು ಪ್ರಾಧಿಕಾರಕ್ಕೆ ಅರ್ಜಿದಾರರು ಪಾವತಿಸತಕ್ಕದ್ದು.
2. ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು.
3. ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಸತಿ ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.

4. ಮಾಸ್ಟರ್‌ಪ್ಲಾನ್ ಪರಿಷ್ಕರಣೆ ಸಂದರ್ಭದಲ್ಲಿ ಯೋಜನೆಯಲ್ಲಿ ಅಳವಡಿಸಬಹುದಾದ ಉದ್ದೇಶಿತ ರಸ್ತೆ ಪರಿಚಲನೆಗೆ ಬೇಕಾಗುವ ಅಗತ್ಯ ಜಮೀನನ್ನು ಬಿಟ್ಟುಕೊಡತಕ್ಕದ್ದು.
5. ಅರ್ಜಿದಾರರೇ ಸದರಿ ಜಮೀನಿನಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಳ್ಳತಕ್ಕದ್ದು.
6. ಸದರಿ ಜಮೀನಿನಲ್ಲಿ ಮಳೆ ನೀರು ಸಂಗ್ರಹಣೆ ತೊಟ್ಟಿ (Rain water harvesting storage) ವ್ಯವಸ್ಥೆಯನ್ನು ಅರ್ಜಿದಾರರೇ ರೂಪಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.468

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ:** ಮೈಸೂರು ತಾಲ್ಲೂಕು ವಾಜಮಂಗಲ ಗ್ರಾಮದ ಮೋಜಣಿ ಸಂಖ್ಯೆ 40/1ಎ, 7ಎ2ಎ1, 6,1ಇ,7ಬಿ ಹಾಗೂ 380ರಲ್ಲಿನ 07 ಎಕರೆ 32.5ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಕೋರಿರುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ:ಮೈನಪ್ರಾ:ನಯೋ:ಸಭೆ: 88:07–08 ದಿನಾಂಕ:30–07–2008.

2) ದಿ:21.11.08ರಂದು ಕಡತ ಸಂಖ್ಯೆ:ನಯೋ:ಉನಿ :ಭೂಉಬ:2:ವಾಜಮಂಗಲ:2008–09ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರು ಮೈಸೂರು ತಾಲ್ಲೂಕು ವಾಜಮಂಗಲ ಗ್ರಾಮದ ಮೋಜಣಿ ಸಂಖ್ಯೆ 40/1ಎ, 7ಎ2ಎ1, 6,1ಇ,7ಬಿ ಹಾಗೂ 380ರಲ್ಲಿನ 07 ಎಕರೆ 32.5 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾಯಿಸುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 760 ಮೈಅಪ್ರಾ 2008, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಮೈಸೂರು ತಾಲ್ಲೂಕು ವಾಜಮಂಗಲ ಗ್ರಾಮದ ಮೋಜಣಿ ಸಂಖ್ಯೆ 40/1ಎ, 7ಎ2ಎ1, 6,1ಇ,7ಬಿ ಹಾಗೂ 380ರಲ್ಲಿನ 07 ಎಕರೆ 32.5ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಪ್ರಕರಣ 18ರನ್ವಯ ಶಾಸನಬದ್ದ ಶುಲ್ಕವನ್ನು ಅರ್ಜಿದಾರರು ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.
2. ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು.
3. ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಸತಿ ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.
4. ಮಾಸ್ಟರ್‌ಪ್ಲಾನ್ ಪರಿಷ್ಕರಣೆ ಸಂದರ್ಭದಲ್ಲಿ ಯೋಜನೆಯಲ್ಲಿ ಅಳವಡಿಸಬಹುದಾದ ಉದ್ದೇಶಿತ ರಸ್ತೆ ಪರಿಚಲನೆಗೆ ಬೇಕಾಗುವ ಅಗತ್ಯ ಜಮೀನನ್ನು ಬಿಟ್ಟುಕೊಡತಕ್ಕದ್ದು.
5. ಅರ್ಜಿದಾರರೇ ಸದರಿ ಜಮೀನಿನಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಳ್ಳತಕ್ಕದ್ದು.
6. ಸದರಿ ಜಮೀನಿನಲ್ಲಿ ಮಳೆ ನೀರು ಸಂಗ್ರಹಣೆ ತೊಟ್ಟಿ (Rain water harvesting storage) ವ್ಯವಸ್ಥೆಯನ್ನು ಅರ್ಜಿದಾರರೇ ರೂಪಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.175

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

4. Following the deliberations in the Allotment Committee Meeting, KREDL have inspected various projects across the river Cauvery along with representatives of the Karnataka Power Corporation Ltd.,. Notices were issued to the concerned companies to be present during inspection along with all technical data and technical personnel consultants.

5. The inspection team in its report read at (3) above, has reported that only the representative of the company furnished an indicative map of the project location. The powerhouse location is proposed to be located about 2500 meters down stream from the weir site. The technical feasibility of the claim made by the company that "the penstock will be ducted below the river bed" to feed the powerhouse down stream was regarded as highly doubtful. No other technical details were furnished to the inspection team.

6. On the basis of their field visit and observations, the inspection team has concluded that the proposed project is in the down stream of the Shivanasamudram Seasonal Scheme of the Karnataka Power Corporation Limited. This Scheme has been recently approved by the Government, for execution of a 270 MW power project by Karnataka Power Corporation Limited, vide Government Order No: EN 74 PPC 2008, dated 30th January 2009. Under the circumstances, the inspection team has concluded that the proposed Bharachukki Small Hydro Project will not receive enough water flow once the project of Karnataka Power Corporation Limited is commissioned. Therefore, the project is not viable. An extract of the Inspection Report is reproduced.

> "The site of Bharachukki Hydro scheme proposed by M/s. Shivanasamudram Power Private Limited was visited on 5.2.2009. The company representative Sri Prashant Bhatkal, Manager of M/s. L.K. Power Corporation Limited was present at the site. He stated that the Director and Proprietor of the company is Sri. A S V Babu. He also stated that the project is purchased by M/s. L.K Power Corporation Limited. Accordingly, he was present during inspection. The location of the weir shown by the company as 50 M. down stream of Sattegala Bridge was very vague. The representative could not locate the weir on the ground. Only an indicative map, was furnished. The power house location, as stated by the representative, is proposed to be located about 2500 M down stream from weir site. It is claimed by Sri Prashant that penstock will be ducted below the river bed to feed the power house down stream. This technical feasibility is doubtful. No other ground details are furnished excepting oral statement to the above effect. He mentioned that the turbine rated head is about 28 M. No PFR furnished even during site inspection. Technical details of the project were not provided during the inspection. From the details furnished by the representative, the proposed project is in the downstream of the Shivanasamudram Seasonal Scheme of KPCL. In this background as and when the KPCL project is commissioned the proposed Bharachukki small hydro project will not receive enough water flow, thereby the project is not viable."

7. The views of the inspection team has been examined in detail at Government level and hence the following Order :-

**GOVERNMENT ORDER NO: EN 128 NCE 2007, BANGALORE, DATED: 9th March 2009.**

Under the circumstances explained in the preamble, the representation of M/s Shivanasamudram Power Private Limited dated: 29.9.2006 for allotment of 24 MW Bhara Chukki Mini Hydel Scheme is hereby rejected.

By order and in the name of Governor of Karnataka,

P.R. 870

**S.J. SAMPATH KUMAR**

Under Secretary to Government, Energy Department

**Sub:** Re-Constitution of Co-ordination Committee to review the progress of Rajiv Gandhi Grameen Vidyutikaran Yojana (RGGVY)-reg.

**Read:** 1) Government Order No: EN 53 EEB 2008 dated: 29.11.2008.

2) The Managing Director, KPTCL D.O. No: KPTCL/MD/PS/08-09 dated: 15.1.2009.

**PREAMBLE** :

1) In the Government Order read at (1) above a Co-ordination Committee to overcome the problems in implementation and to review the progress of Rajiv Gandhi Grameen Vidyutikaran Yojana (RGGVY) with the following members :

| | | |
|---|---|---|
| 1 | Sri. Sudhakar Rao I.A.S.,<br>Chief Secretary to Government of Karnataka. | Chairman |
| 2 | Sri. T. Sunil Kumar I.P.S.,<br>Secretary to Government, Home Department. | Member |
| 3 | Sri. D. Thangaraj I.A.S.,<br>Principal Secretary to Government, Revenue Department. | Member |
| 4 | Dr. M.H. Swaminath I.F.S,<br>Secretary to Government, Forest Department. | Member |
| 5 | Sri. S.T. Ramesh I.P.S.,<br>Director General of Police (Crimes) | Member |
| 6 | The Managing Directors of ESCOMs. | Member |
| 7 | Sri. R. Anbalagan,<br>Chief Project Manager, Rural Electrification Corporation (REC) | Member |
| 8 | Sri. P.N. Venkatesh,<br>Chief Engineer, KPTCL. | Member<br>Secretary. |

2) The Managing Director, KPTCL in D.O. letter read at (2) above has requested to Re-Constitute the above Committee with addition of the following members :-

| | | |
|---|---|---|
| 1 | The Principal Secretary to Government,<br>Energy Department. | Member |
| 2 | The Managing Director, KPTCL. | Member |
| 3 | The Director (Transmission), KPTCL. | Member |
| 4 | The General Manager (Projects), BESCOM. | Member<br>Secretary |

The proposal has been examined and the following Orders are issued :-

**Government Order No : EN 53 EEB 2008, Bangalore, Dated : 5$^{th}$ March 2009.**

Government are pleased to Re-constitute a Co-ordination Committee to overcome the problems in implementation and to review the progress of Rajiv Gandhi Grameen Vidyutikaran Yojana (RGGVY) with the following members with immediate effect and until further Orders :-

| | | |
|---|---|---|
| 1 | The Chief Secretary to Government of Karnataka. | Chairman |
| 2 | The Principal Secretary to Government,<br>Energy Department. | Member |
| 3 | The Principal Secretary to Government,<br>Revenue Department. | Member |
| 4 | The Secretary to Government,<br>Home Department. | Member |
| 5 | The Secretary to Government,<br>Forest, Ecology & Environment Department (Forest). | Member |
| 6 | The Managing Director, KPTCL, Bangalore. | Member |
| 7 | Director General of Police (Crimes), Bangalore. | Member |
| 8 | The Managing Directors of ESCOMs. | Member |
| 9 | The Chief Project Manager,<br>Rural Electrification Corporation (REC), Bangalore. | Member |
| 10 | The Director (Transmission), KPTCL, Bangalore. | Member |

| 11 | The Chief Engineer (RT & APR), KPTCL, Bangalore. | Member |
|---|---|---|
| 12 | The General Manager (Projects), BESCOM, Bangalore. | Member Secretary |

By order and in the Name of Governor of Karnataka,

P.R.869

**S.J. SAMPATH KUMAR**

Under Secretary to Government, Energy Department

**ಇಂಧನ ಸಚಿವಾಲಯ**

**ವಿಷಯ:** ಮೆ:: ಜಿನೆವಾ ಪವರ್ ಲಿಮಿಟೆಡ್ ಕಂಪನಿಗೆ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಗಿರಿಕಾನಹಳ್ಳಿ ಕಿರು ಜಲ ವಿದ್ಯುತ್ ಯೋಜನೆ ಹಾಗೂ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಅಡ್ಡಗಾನೆ ಕಿರು ಜಲ ವಿದ್ಯುತ್ ಯೋಜನೆಗಳನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 107 ಎನ್‌ಸಿಇ 2001 (2) ದಿನಾಂಕ : 19.9.2001.
2) ಸರ್ಕಾರಿ ಪತ್ರ ಸಂಖ್ಯೆ : ಡಿಇ 107 ಎನ್‌ಸಿಇ 2001 ದಿನಾಂಕ : 27.3.2002.
3) ಸರ್ಕಾರಿ ಆದೇಶ ಸಂಖ್ಯೆ : ಇಎನ್ 341 ಎನ್‌ಸಿಇ 2005 ದಿನಾಂಕ : 11.11.2005.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 236 ಎನ್‌ಸಿಇ 2002 ದಿನಾಂಕ: 13.9.2004.
5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/06/ಅಡ್ಡಗಾನೆ/08/2019 ದಿನಾಂಕ: 26.11.2008/2.12.2008.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಮೆ:: ಪಾವನ ಗಂಗಾ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಮೇಲಿನ ಹುಲುವತ್ತಿ ಗ್ರಾಮದ ಗಿರಿಕಾನಹಳ್ಳ ತೊರೆಗೆ ಅಡ್ಡಲಾಗಿ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಗಿರಿಕಾನಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಗಿರಿಕಾನಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಮೆ:: ಪಾವನ ಗಂಗಾ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯಿಂದ ಮೆ:: ಜಿನೆವಾ ಪವರ್ ಲಿಮಿಟೆಡ್ ಕಂಪನಿಯ ಹೆಸರಿನಲ್ಲಿ ಅನುಮತಿಯನ್ನು ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಆದೇಶದಲಿ ಮೆ:: ಜಿನೆವಾ ಪವರ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಮೇಲಿನ ಹುಲುವತ್ತಿ ಗ್ರಾಮದ ಗಿರಿಕಾನಹಳ್ಳ ತೊರೆಗೆ ಅಡಲ್ಲಾಗಿ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಗಿರಿಕಾನಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಆದೇಶದಲ್ಲಿ ಮೆ :: ಜಿನೆವಾ ಪವರ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಅತ್ತಿಗುಂಡಿ ಗ್ರಾಮದ ಅಡ್ಡಗಾನೆ ತೊರೆಯಲ್ಲಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಅಡ್ಡಗಾನೆ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಪತ್ರದಲ್ಲಿ ಕ್ರೆಡಲ್‌ನ ವ್ಯವಸ್ಥಾಪಕ ನಿರ್ದೇಶಕರು ಭೂಸ್ವಾಧೀನ ಪ್ರಕ್ರಿಯೆ ವಿಳಂಬವಾಗಿರುವ ಹಿನ್ನೆಲೆಯಲ್ಲಿ, ಯೋಜನೆಗಳನ್ನು ನಿಗದಿತ ಅವಧಿಯಲ್ಲಿ ಪ್ರಾರಂಭಿಸಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿ, ಸದರಿ ಎರಡು ಯೋಜನೆಗಳಾದ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಗಿರಿಕಾನಹಳ್ಳಿ ಕಿರು ಜಲ ವಿದ್ಯುತ್ ಯೋಜನೆ ಹಾಗೂ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಅಡ್ಡಗಾನೆ ಕಿರು ಜಲ ವಿದ್ಯುತ್ ಯೋಜನೆಗಳನ್ನು ಅನುಷ್ಠಾನದ ಕಾಲಾವಧಿಯನ್ನು ಮುಂದಿನ 18 ತಿಂಗಳುಗಳಿಗೆ ವಿಸ್ತರಿಸಲು ಪರಿಗಣಿಸುವಂತೆ ಕೋರಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 423 ಎನ್‌ಸಿಇ 2008, ಬೆಂಗಳೂರು, ದಿನಾಂಕ: 6ನೇ ಮಾರ್ಚ್ 2009.**

ಮೆ:: ಜಿನೆವಾ ಪವರ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಮೇಲಿನ ಹುಲುವತ್ತಿ ಗ್ರಾಮದ ಗಿರಿಕಾನಹಳ್ಳ ತೊರೆಗೆ ಅಡ್ಡಲಾಗಿ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಗಿರಿಕಾನಹಳ್ಳ ಕಿರು ಜಲ ವಿದ್ಯುತ್ ಯೋಜನೆ ಹಾಗೂ ಮೆ :: ಜಿನೆವಾ ಪವರ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಅತ್ತಿಗುಂಡಿ ಗ್ರಾಮದ ಅಡ್ಡಗಾನೆ ತೊರೆಯಲ್ಲಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಅಡ್ಡಗಾನೆ ಕಿರು ಜಲ ವಿದ್ಯುತ್ ಯೋಜನೆಗಳನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಕಟ್ಟಕಡೆಯದಾಗಿ ದಿನಾಂಕ : 11.11.2008 ರಿಂದ ಮುಂದಿನ ಒಂದು ವರ್ಷದ ಅವಧಿಗೆ ವಿಸ್ತರಿಸಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ಮತ್ತು (4) ರಲ್ಲಿ ಓದಲಾದ ಹಂಚಿಕೆ ಆದೇಶಗಳ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 818 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

**ವಿಷಯ:** ಮೆ:: ಎಸ್.ಕೆ.ಎನ್ ಹೈಡ್ರೋ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಯಾತನೂರು ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಂಇ 299 ಎನ್‌ಸಿಇ 2004 ದಿನಾಂಕ: 13.9.2004.
2) ಸರ್ಕಾರಿ ಆದೇಶ ಸಂಖ್ಯೆ: ಇಂಇ 118 ಎನ್‌ಸಿಇ 2005 ದಿನಾಂಕ: 27.4.2005.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಯಾತನೂರು/2008/1767 ದಿನಾಂಕ: 17/24.10.2008.

**ಪ್ರಸ್ತಾವನೆ**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಎಸ್.ಕೆ.ಎನ್ ಹೈಡ್ರೋ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬಿಜಾಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ಯಾತನೂರು ಗ್ರಾಮದ ಬಳಿ ಇಂಡಿ ಬ್ರಾಂಚ್ ಕೆನಾಲ್‌ನ ಡಿಸ್ಟ್ರಿಬ್ಯೂಟರಿ–11 (20.2 ಕಿ.ಮೀ. ನಿಂದ 21.5 ಕಿ.ಮೀ) ಕ್ಕೆ ಅಡ್ಡಲಾಗಿ 500 ಕಿಲೊ ವ್ಯಾಟ್ (0.5 ಮೆಗಾ ವ್ಯಾಟ್) ಸಾಮರ್ಥ್ಯದ ಯಾತನೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಎಸ್.ಕೆ.ಎನ್ ಹೈಡ್ರೋ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬಿಜಾಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ಯಾತನೂರು ಗ್ರಾಮದ ಬಳಿ ಇಂಡಿ ಬ್ರಾಂಚ್ ಕೆನಾಲ್‌ನ ಡಿಸ್ಟ್ರಿಬ್ಯೂಟರಿ–11 (20.2 ಕಿ.ಮೀ. ನಿಂದ 21.5 ಕಿ.ಮೀ) ಕ್ಕೆ (ಮೊದಲು ಹಂಚಿಕೆ ಮಾಡಿದ ಸ್ಥಳವು ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ತಾಲ್ಲೂಕಿನ ವ್ಯಾಪ್ತಿಗೆ ಬರುತ್ತದೆ) ಅಡ್ಡಲಾಗಿ ಹಂಚಿಕೆಯಾದ 500 ಕಿಲೊ ವ್ಯಾಟ್ (0.5 ಮೆಗಾ ವ್ಯಾಟ್) ಸಾಮರ್ಥ್ಯದ ಯಾತನೂರು ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಸದರಿ ಯೋಜನೆಯ ಅನುಷ್ಠಾನದ ಕಾಲಾವಧಿಯನ್ನು ಇನ್ನೂ 3 ವರ್ಷಗಳವರೆಗೆ ವಿಸ್ತರಿಸುವಂತೆ ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 374 ಎನ್‌ಸಿಇ 2008, ಬೆಂಗಳೂರು, ದಿನಾಂಕ: 12ನೇ ಜನವರಿ 2009.**

ಮೆ:: ಎಸ್.ಕೆ.ಎನ್ ಹೈಡ್ರೋ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ತಾಲ್ಲೂಕಿನ ಯಾತನೂರು ಗ್ರಾಮದ ಬಳಿ ಇಂಡಿ ಬ್ರಾಂಚ್ ಕೆನಾಲ್‌ನ ಡಿಸ್ಟ್ರಿಬ್ಯೂಟರಿ–11 (20.2 ಕಿ.ಮೀ. ನಿಂದ 21.5 ಕಿ.ಮೀ) ಕ್ಕೆ ಅಡ್ಡಲಾಗಿ ಹಂಚಿಕೆ ಮಾಡಲಾದ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಯಾತನೂರು ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನದ ಕಾಲಾವಧಿಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಇನ್ನೂ 24 ತಿಂಗಳುಗಳವರೆಗೆ ವಿಸ್ತರಿಸಲಾಗಿದೆ.

ಸರ್ಕಾರಿ ಆದೇಶ ಸಂಖ್ಯೆ: ಇಂಇ 299 ಎನ್‌ಸಿಇ 2004 ದಿನಾಂಕ: 13.9.2004 ರ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 443 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

**ವಿಷಯ:** ಮೆ:: ವೆಸ್ಟ್ ಮೌಂಟನ್ ಪವರ್ ಲಿಮಿಟೆಡ್ ಕಂಪನಿಯ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಸಂಗಮ್–2 ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಫ್ರಾಂಟಿಯರ್ ಆಫ್ ಷೋರ್ ಡ್ರಿಲಿಂಗ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಡಿಯಲ್ಲಿ ಅನುಷ್ಠಾನ ಮಾಡಲು ಅನುಮತಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 416 ಎನ್‌ಸಿಇ 2006 ದಿನಾಂಕ: 8.3.2007.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/06/ಸಂಗಮ್–2/ಹೈಡ್ರೊ/2177 ದಿನಾಂಕ: 17/19.12.2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ವೆಸ್ಟ್ ಮೌಂಟನ್ ಪವರ್ ಲಿಮಿಟೆಡ್ ಕಂಪನಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚೆನ್ನಪಟ್ಟಣ ತಾಲ್ಲೂಕಿನ ಸಂಗಮ್ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಸಂಗಮ್ ಹಂತ–2 ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವು ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಸಂಗಮ್ ಹಂತ–2 ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ವೆಸ್ಟ್ ಮೌಂಟನ್ ಪವರ್ ಲಿಮಿಟೆಡ್ ಕಂಪನಿಯಿಂದ ಅದರದೆ ಸಹೋದರ ಸಂಸ್ಥೆಯಾಗಿರುವ ಮೆ:: ಫ್ರಾಂಟಿಯರ್ ಆಫ್ ಷೋರ್ ಡ್ರಿಲಿಂಗ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿನಡಿಯಲ್ಲಿ ಅನುಷ್ಠಾನ ಮಾಡಲು ಹಾಗೂ ಹಂಚಿಕೆಯಾಗಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣ ತಾಲ್ಲೂಕಿನ ಸಂಗಮ್ ಗ್ರಾಮವು ಪ್ರಸ್ತುತ ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನ ವ್ಯಾಪ್ತಿಗೆ ಒಳಪಡುವುದರಿಂದ, ಸದರಿ ಯೋಜನೆಯ ಸ್ಥಳವನ್ನು ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನ ಸಂಗಮ್ ಗ್ರಾಮವೆಂದು ಬದಲಾಯಿಸಲು ಸರ್ಕಾರಕ್ಕೆ ಶಿಫಾರಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 539 ಎನ್‌ಸಿಇ 2008, ಬೆಂಗಳೂರು, ದಿನಾಂಕ: 30ನೇ ಜನವರಿ 2009.**

15.00 ಮೆಗಾ ವ್ಯಾಟ್ ಸಾಮರ್ಥ್ಯದ ಸಂಗಮ್ ಹಂತ–2 ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ವೆಸ್ಟ್ ಮೌಂಟನ್ ಪವರ್ ಲಿಮಿಟೆಡ್ ಕಂಪನಿಯಿಂದ ಅದರದೆ ಸಹೋದರ ಸಂಸ್ಥೆಯಾಗಿರುವ ಮೆ:: ಫ್ರಾಂಟಿಯರ್ ಆಫ್ ಷೋರ್ ಡ್ರಿಲಿಂಗ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿನಡಿಯಲ್ಲಿ ಅನುಷ್ಠಾನ ಮಾಡಲು ಅನುಮತಿಸಿದೆ ಹಾಗೂ ಹಂಚಿಕೆಯಾಗಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚೆನ್ನಪಟ್ಟಣ ತಾಲ್ಲೂಕಿನ ಸಂಗಮ್ ಗ್ರಾಮವು ಪ್ರಸ್ತುತ ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನ ವ್ಯಾಪ್ತಿಗೆ ಒಳಪಡುವುದರಿಂದ, ಸದರಿ ಯೋಜನೆಯ ಸ್ಥಳವು ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನ ಸಂಗಮ್ ಗ್ರಾಮದ ವ್ಯಾಪ್ತಿಗೆ ಒಳಪಡುತ್ತದೆ.

ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1) ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.455

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

**ವಿಷಯ:** ಮೆ:: ಧನಲಕ್ಷ್ಮಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಂಇ 140 ಎನ್‌ಸಿಇ 2003 ದಿನಾಂಕ: 26.2.2004.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 53 ಎನ್‌ಸಿಇ 2007 ದಿನಾಂಕ: 7.3.2007.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ತೀರ್ಥಹಳ್ಳಿ ಎಂಹೆಚ್‌ಎಸ್/08/1910 ದಿನಾಂಕ: 14.11.2008.
4) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 378 ಎನ್‌ಸಿಇ 2008 (1) ದಿನಾಂಕ: 17.12.2008.
5) ಮೆ:: ಧನಲಕ್ಷ್ಮಿ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ನೀಡಿರುವ ಉತ್ತರ ದಿನಾಂಕ: 2.1.2009.

**ಪ್ರಸ್ತಾವನೆ :**

ಮೆ:: ಧನಲಕ್ಷ್ಮಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಭೀಮನಕಟ್ಟೆ ಗ್ರಾಮದ ಬಳಿ ತುಂಗಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿತ್ತು.

ಸದರಿ ಕಂಪನಿಗೆ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು 3 ವರ್ಷಗಳ ಅವಧಿಗೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾಗಿತ್ತು.

ಯೋಜನಾ ಸ್ಥಳವನ್ನು ಕ್ರೆಡಲ್ ಸಂಸ್ಥೆಯ ಉಪ ಮಹಾ ಪ್ರಬಂಧಕರು ದಿನಾಂಕ: 3.11.2008 ರಂದು ಪರಿವೀಕ್ಷಣೆ ಮಾಡಿ, ಸದರಿ ಸ್ಥಳದಲ್ಲಿ ಯೋಜನೆ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದು ಕಂಡು ಬರುವುದಿಲ್ಲ ಎಂದು

ತಿಳಿಸಿ, ಹಂಚಿಕೆಯಾಗಿರುವ ಕಂಪನಿಗಳು ನೆರೆ ಬಂದಾಗಿನ ಗರಿಷ್ಠ ಮಟ್ಟವನ್ನು ನೀಡಿರುವುದಿಲ್ಲ ಹಾಗೂ ಆಸು ಪಾಸಿನ ಜಲಾಶಯ ಹಾಗೂ ಇತರೆ ಸ್ಥಳಗಳಿಗೆ ಆಗುವ ಹಾನಿಯನ್ನು ಅಂದಾಜಿಸಿರುವುದಿಲ್ಲವೆಂದು ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ವರದಿ ಮಾಡಿರುತ್ತಾರೆ. ಅಲ್ಲದೇ ಸ್ಥಳೀಯ ಜನತೆಯ ವಿರೋಧದ ಕಾರಣದಿಂದ ಸದರಿ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸಬಹುದಾಗಿದೆ ಎಂದು ಶಿಫಾರಸು ಮಾಡಿರುತ್ತಾರೆ.

ಯೋಜನಾ ಅನುಷ್ಠಾನನಿಟ್ಟಿನಲ್ಲಿ ಸದರಿ ಕಂಪನಿಯು ಇದುವರೆಗೂ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ಹಾಗೂ ಸದರಿ ಯೋಜನೆ ವಿರುದ್ಧ ಸ್ಥಳೀಯರು ಚಳುವಳಿ ನಡೆಸುತ್ತಿರುವುದರಿಂದ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂದು ತಿಳಿಸಿ ಸದರಿ ಅಭಿವೃದ್ಧಿದಾರರಿಗೆ ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನಲ್ಲಿ ಸಮಜಾಯಿಷಿಯನ್ನು ಕೋರಲಾಗಿತ್ತು.

ಸದರಿ ಕಾರಣ ಕೇಳುವ ನೋಟೀಸಿಗೆ ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಪತ್ರದಲ್ಲಿ ಸಮಜಾಯಿಷಿಯನ್ನು ಕಂಪನಿಯು ನೀಡಿತ್ತು. ಕಂಪನಿಯು ನೀಡಿರುವ ಸಮಜಾಯಿಷಿಯು ಸಮಾಧಾನಕರವಾಗಿಲ್ಲವೆಂದು ತೀರ್ಮಾನಿಸಿ ಹಾಗೂ ಈ ಯೋಜನೆಗೆ ಸ್ಥಳೀಯರಿಂದ ತೀವ್ರತರವಾದ ವಿರೋಧ ವ್ಯಕ್ತವಾಗಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 11 ಎನ್‌ಸಿಇ 2009, ಬೆಂಗಳೂರು, ದಿನಾಂಕ: 29ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಇಂಇ 140 ಎನ್‌ಸಿಇ 2003 ದಿನಾಂಕ: 26.2.2004 ರಲ್ಲಿ ಮೆ:: ಧನಲಕ್ಷ್ಮಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಭೀಮನಕಟ್ಟೆ ಗ್ರಾಮದ ಬಳಿ ತುಂಗಾ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 457

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

**ವಿಷಯ:** ಮೆ:: ಶ್ರೀ ಅವನಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಂಇ 139 ಎನ್‌ಸಿಇ 2003 ದಿನಾಂಕ: 26.2.2004.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 50 ಎನ್‌ಸಿಇ 2007 ದಿನಾಂಕ: 7.3.2007.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ತೀರ್ಥಹಳ್ಳಿ ಎಂಹೆಚ್‌ಎಸ್/08/1910 ದಿನಾಂಕ: 14.11.2008.
4) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 378 ಎನ್‌ಸಿಇ 2008 (3) ದಿನಾಂಕ: 17.12.2008.
5) ಮೆ:: ಶ್ರೀ ಅವನಿ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ನೀಡಿರುವ ಉತ್ತರ ದಿನಾಂಕ: 2.1.2009.

**ಪ್ರಸ್ತಾವನೆ :**

ಮೆ:: ಶ್ರೀ ಅವನಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಬಳಗರ್‌ಮಠ್‌ದ ಗ್ರಾಮದ ಬಳಿ ತುಂಗಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿತ್ತು.

ಸದರಿ ಕಂಪನಿಗೆ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು 3 ವರ್ಷಗಳ ಅವಧಿಗೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾಗಿತ್ತು.

ಯೋಜನಾ ಸ್ಥಳವನ್ನು ಕ್ರೆಡಲ್ ಸಂಸ್ಥೆಯ ಉಪ ಮಹಾ ಪ್ರಬಂಧಕರು ದಿನಾಂಕ: 3.11.2008 ರಂದು ಪರಿವೀಕ್ಷಣೆ ಮಾಡಿ, ಸದರಿ ಸ್ಥಳದಲ್ಲಿ ಯೋಜನೆ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದು ಕಂಡು ಬರುವುದಿಲ್ಲ ಎಂದು ತಿಳಿಸಿ, ಹಂಚಿಕೆಯಾಗಿರುವ ಕಂಪನಿಗಳು ನೆರೆ ಬಂದಾಗಿನ ಗರಿಷ್ಠ ಮಟ್ಟವನ್ನು ನೀಡಿರುವುದಿಲ್ಲ ಹಾಗೂ ಆಸು ಪಾಸಿನ ಜಲಾಶಯ ಹಾಗೂ ಇತರೆ ಸ್ಥಳಗಳಿಗೆ ಆಗುವ ಹಾನಿಯನ್ನು ಅಂದಾಜಿಸಿರುವುದಿಲ್ಲವೆಂದು ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ವರದಿ ಮಾಡಿರುತ್ತಾರೆ. ಅಲ್ಲದೇ ಸ್ಥಳೀಯ ಜನತೆಯ ವಿರೋಧದ ಕಾರಣದಿಂದ ಸದರಿ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸಬಹುದಾಗಿದೆ ಎಂದು ಶಿಫಾರಸು ಮಾಡಿರುತ್ತಾರೆ.

ಯೋಜನಾ ಅನುಷ್ಠಾನನಿಟ್ಟಿನಲ್ಲಿ ಸದರಿ ಕಂಪನಿಯು ಇದುವರೆಗೂ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ಹಾಗೂ ಸದರಿ ಯೋಜನೆ ವಿರುದ್ಧ ಸ್ಥಳೀಯರು ಚಳುವಳಿ ನಡೆಸುತ್ತಿರುವುದರಿಂದ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂದು ತಿಳಿಸಿ ಸದರಿ ಅಭಿವೃದ್ಧಿದಾರರಿಗೆ ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನಲ್ಲಿ ಸಮಜಾಯಿಷಿಯನ್ನು ಕೋರಲಾಗಿತ್ತು.

ಸದರಿ ಕಾರಣ ಕೇಳುವ ನೋಟೀಸಿಗೆ ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಪತ್ರದಲ್ಲಿ ಸಮಜಾಯಿಷಿಯನ್ನು ಕಂಪನಿಯು ನೀಡಿತ್ತು. ಕಂಪನಿಯು ನೀಡಿರುವ ಸಮಜಾಯಿಷಿಯು ಸಮಾಧಾನಕರವಾಗಿಲ್ಲವೆಂದು ತೀರ್ಮಾನಿಸಿ ಹಾಗೂ ಈ ಯೋಜನೆಗೆ ಸ್ಥಳೀಯರಿಂದ ತೀವ್ರತರವಾದ ವಿರೋಧ ವ್ಯಕ್ತವಾಗಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 12 ಎನ್‌ಸಿಇ 2009, ಬೆಂಗಳೂರು, ದಿನಾಂಕ: 29ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಇಂಇ 139 ಎನ್‌ಸಿಇ 2003 ದಿನಾಂಕ: 26.2.2004 ರಲ್ಲಿ ಮೆ:: ಶ್ರೀ ಅವನಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಬಳಗರ್‌ಮಠ್‌ದ ಗ್ರಾಮದ ಬಳಿ ತುಂಗಾ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 456

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

**ವಿಷಯ:** ಮೆ:: ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಯ 9.00 ಮೆಗಾ ವ್ಯಾಟ್ ಸಾಮರ್ಥ್ಯದ ಕುರುವಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 442 ಎನ್‌ಸಿಇ 2006 ದಿನಾಂಕ: 8.3.2007.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 36 ಎನ್‌ಸಿಇ 2008 ದಿನಾಂಕ: 16.2.2008.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ತೀರ್ಥಹಳ್ಳಿ ಎಂಹೆಚ್‌ಎಸ್/08/1910 ದಿನಾಂಕ: 14.11.2008.
4) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 378 ಎನ್‌ಸಿಇ 2008 (2) ದಿನಾಂಕ: 17.12.2008.
5) ಮೆ:: ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಯವರು ನೀಡಿರುವ ಉತ್ತರ ದಿನಾಂಕ: 20.12.2008.

**ಪ್ರಸ್ತಾವನೆ :**

ಮೆ:: ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಕುರುವಳ್ಳಿ ಗ್ರಾಮದ ಬಳಿ ತುಂಗಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕುರುವಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿತ್ತು.

ಸದರಿ ಕಂಪನಿಗೆ ಯೋಜನೆಯ ಸಾಮರ್ಥ್ಯವನ್ನು 9.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಯೋಜನಾ ಸ್ಥಳವನ್ನು ಕ್ರೆಡಲ್ ಸಂಸ್ಥೆಯ ಉಪ ಮಹಾ ಪ್ರಬಂಧಕರು ದಿನಾಂಕ: 3.11.2008 ರಂದು ಪರಿವೀಕ್ಷಣೆ ಮಾಡಿ, ಸದರಿ ಸ್ಥಳದಲ್ಲಿ ಯೋಜನೆ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದು ಕಂಡು ಬರುವುದಿಲ್ಲ ಎಂದು ತಿಳಿಸಿ, ಹಂಚಿಕೆಯಾಗಿರುವ ಕಂಪನಿಗಳು ನೆರೆ ಬಂದಾಗಿನ ಗರಿಷ್ಠ ಮಟ್ಟವನ್ನು ನೀಡಿರುವುದಿಲ್ಲ ಹಾಗೂ ಆಸು ಪಾಸಿನ ಜಲಾಶಯ ಹಾಗೂ ಇತರೆ ಸ್ಥಳಗಳಿಗೆ ಆಗುವ ಹಾನಿಯನ್ನು ಅಂದಾಜಿಸಿರುವುದಿಲ್ಲವೆಂದು ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ವರದಿ ಮಾಡಿರುತ್ತಾರೆ. ಅಲ್ಲದೇ ಸ್ಥಳೀಯ ಜನತೆಯ ವಿರೋಧದ ಕಾರಣದಿಂದ ಸದರಿ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸಬಹುದಾಗಿದೆ ಎಂದು ಶಿಫಾರಸು ಮಾಡಿರುತ್ತಾರೆ.

ಯೋಜನಾ ಅನುಷ್ಠಾನನಿಟ್ಟಿನಲ್ಲಿ ಸದರಿ ಕಂಪನಿಯು ಇದುವರೆಗೂ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ಹಾಗೂ ಸದರಿ ಯೋಜನೆ ವಿರುದ್ಧ ಸ್ಥಳೀಯರು ಚಳುವಳಿ ನಡೆಸುತ್ತಿರುವುದರಿಂದ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂದು ತಿಳಿಸಿ ಸದರಿ ಅಭಿವೃದ್ಧಿದಾರರಿಗೆ ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನಲ್ಲಿ ಸಮಜಾಯಿಷಿಯನ್ನು ಕೋರಲಾಗಿತ್ತು.

ಸದರಿ ಕಾರಣ ಕೇಳುವ ನೋಟೀಸಿಗೆ ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಪತ್ರದಲ್ಲಿ ಸಮಜಾಯಿಷಿಯನ್ನು ಕಂಪನಿಯು ನೀಡಿತ್ತು. ಕಂಪನಿಯು ನೀಡಿರುವ ಸಮಜಾಯಿಷಿಯು ಸಮಾಧಾನಕರವಾಗಿಲ್ಲವೆಂದು ತೀರ್ಮಾನಿಸಿ ಹಾಗೂ ಈ ಯೋಜನೆಗೆ ಸ್ಥಳೀಯರಿಂದ ತೀವ್ರತರವಾದ ವಿರೋಧ ವ್ಯಕ್ತವಾಗಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಲಾಗಿದೆ :

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 538 ಎನ್‌ಸಿಇ 2008, ಬೆಂಗಳೂರು, ದಿನಾಂಕ: 29ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಇಎನ್ 442 ಎನ್‌ಸಿಇ 2006 ದಿನಾಂಕ: 8.3.2007 ಮತ್ತು ಇಎನ್ 36 ಎನ್‌ಸಿಇ 2008 ದಿನಾಂಕ: 16.2.2008 ರಲ್ಲಿ ಮೆ:: ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಕುರುವಳ್ಳಿ ಗ್ರಾಮದ ಬಳಿ ತುಂಗಾ ನದಿಗೆ ಅಡ್ಡಲಾಗಿ ಅನುಷ್ಠಾನ ಮಾಡಲು ಅನುಮತಿಸಲಾಗಿರುವ 9.00 ಮೆಗಾ ವ್ಯಾಟ್ ಸಾಮರ್ಥ್ಯದ ಕುರುವಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯ ಆದೇಶಗಳನ್ನು ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.458

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

**ವಿಷಯ:** ಮೆ:: ಶರಣ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಯಾದಗಿರ್ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 9.00 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 293 ಎನ್‌ಸಿಇ 2004 ದಿನಾಂಕ: 9.9.2004.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 298 ಎನ್‌ಸಿಇ 2007 ದಿನಾಂಕ: 9.10.2007.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಯಾದಗಿರಿ/2006/1766 ದಿನಾಂಕ: 17/24.10.2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1) ರ ಸರ್ಕಾರಿ ಆದೇಶದಲ್ಲಿ ಮೆ:: ಶರಣ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಯಾದಗೀರ್ ತಾಲ್ಲೂಕಿನ ಭೀಮಾ ನದಿಗೆ ಕಟ್ಟುತ್ತಿರುವ ಬ್ಯಾರೇಜಿಗೆ ಅಡ್ಡಲಾಗಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ತದ ನಂತರ ಮೇಲೆ ಓದಲಾದ ಕ್ರಮಾಂಕ (2) ರ ಸರ್ಕಾರಿ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 1.00 ಮೆಗಾ ವ್ಯಾಟ್‌ನಿಂದ 6.00 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (3) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಸದರಿ ಸ್ಥಳದಲ್ಲಿ ಇನ್ನೂ ಹೆಚ್ಚಿನ ವಿದ್ಯುತ್ ಉತ್ಪಾದನಾ ಸಾಮರ್ಥ್ಯ ಇರುವುದರಿಂದ ಯೋಜನೆಯ ಸಾಮರ್ಥ್ಯವನ್ನು ಕೆಲವು ಷರತ್ತುಗಳನ್ನು ಅಳವಡಿಸಿ, 6.00 ಮೆಗಾ ವ್ಯಾಟ್‌ನಿಂದ 9.00 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 375 ಎನ್‌ಸಿಇ 2008, ಬೆಂಗಳೂರು, ದಿನಾಂಕ: 13ನೇ ಜನವರಿ 2009.**

ಮೆ:: ಶರಣ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಯಾದಗೀರ್ ತಾಲ್ಲೂಕಿನ ಭೀಮಾ ನದಿಗೆ ಕಟ್ಟುತ್ತಿರುವ ಬ್ಯಾರೇಜಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ ಯಾದಗೀರ್ ಕಿರು ಜಲ ವಿದ್ಯುತ್ ಯೋಜನಾ ಸಾಮರ್ಥ್ಯವನ್ನು 6.00 ಮೆಗಾ ವ್ಯಾಟ್‌ನಿಂದ 9.00 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಈ ಕೆಳಕಂಡ ಷರತ್ತಿಗೊಳಪಟ್ಟು ಅನುಮತಿ ನೀಡಲಾಗಿದೆ:

1. ಮುಂದೆ ಬರುವ ಸರ್ಕಾರದ ಯಾವುದೇ ವಿದ್ಯುತ್ ಯೋಜನೆಗಳಿಂದ ಅಥವಾ ನೀರಾವರಿ ಯೋಜನೆಗಳಿಂದಾಗಲೀ, ಕುಡಿಯುವ ನೀರಿನ ಯೋಜನೆಗಳಿಂದಾಗಲಿ ನೀರಿನ ಕೊರತೆಯಾದಲ್ಲಿ ಅಥವಾ ಇನ್ನಾವುದೇ ಧಕ್ಕೆಯಾದಲ್ಲಿ ಅಭಿವೃದ್ಧಿದಾರರು ಯಾವುದೇ ರೀತಿಯ ಪರಿಹಾರವನ್ನು ನಿರೀಕ್ಷಿಸಬಾರದು. ಈ ಯೋಜನೆಗೆ ಯಾವುದೇ ಹಾನಿಯಾದ್ದಲ್ಲಿ ಅದಕ್ಕೆ ಅಭಿವೃದ್ಧಿದಾರರೇ ಸಂಪೂರ್ಣ ಜವಾಬ್ದಾರರು.
2. ಸ್ಥಳೀಯ ಕ್ಷೇತ್ರದಲ್ಲಿ ಈ ಯೋಜನೆಯಿಂದ ಯಾವುದೇ ಅನಾನುಕೂಲತೆಗಳು ಆಗಕೂಡದು.
3. ಸದರಿ ಯೋಜನೆಯು ಬ್ಯಾರೇಜ್ ಬೇಸ್ ಆಗಿರುವುದರಿಂದ ಸರ್ಕಾರದಿಂದ ನಿರ್ಮಿತವಾಗಿರುವ ಬ್ಯಾರೇಜಿನ ನಿರ್ದಿಷ್ಟ ಮಟ್ಟದ ನೀರನ್ನು ಬಿಟ್ಟು ಹೆಚ್ಚುವರಿ ನೀರನ್ನು ಮಾತ್ರ ಸದರಿ ಯೋಜನೆಗೆ ಉಪಯೋಗಿಸಬೇಕು.
4. ಸದರಿ ಯೋಜನೆಯಿಂದ ಕೆಳತೊರೆ ಹಾಗೂ ಮೇಲ್ತೊರೆಯ ಯಾವುದೇ ಯೋಜನೆಗಳಿಗೆ ಹಾನಿಯಾಗಕೂಡದು.

5. ಸರ್ಕಾರದ ಯಾವುದೇ ರೂಪರೇಶೆಗಳನ್ನು ಹಾಗೂ ಸರ್ಕಾರಕ್ಕೆ ಸಂಬಂಧಿಸಿದ ಆಸ್ತಿಗಾಗಲಿ ಯಾವುದೇ ಹಾನಿಯಾಗಕೂಡದು. ಸದರಿ ಯೋಜನೆಯಿಂದ ಹಾನಿ ಸಂಭವಿಸಿದಲ್ಲಿ ಅಭಿವೃದ್ಧಿದಾರರೇ ಜವಾಬ್ದಾರರಾಗಿರುತ್ತಾರೆ.
6. ಮೇಲ್ಕಂಡ ನಿಬಂಧನೆಗಳನ್ನು ಅಭಿವೃದ್ಧಿದಾರರು ಪಾಲಿಸದಿದ್ದಲ್ಲಿ ಸದರಿ ಆದೇಶವನ್ನು ರದ್ದು ಪಡಿಸುವುದು/ ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಉಳಿದಂತೆ, ಸರ್ಕಾರಿ ಆದೇಶ ಸಂಖ್ಯೆ: ಇಎನ್ 293 ಎನ್‌ಸಿಇ 2004 ದಿನಾಂಕ: 9.9.2004 ರ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 459

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

## ENERGY SECRETARIAT

**Sub**: Transfer of 15.00 MW Wind Power Capacity in favour of M/s Doddanavar Brothers-reg.

**Read**:
1. Government Order No: EN 22 NCE 2006 dated: 20.4.2006.
2. Government Order No: EN 339 NCE 2008 dated: 29.12.2008.
3. Letter No: KRED/08/DB/2009/153 dated: 19/21.1.2009 received from the Managing Director, Karnataka Renewable Energy Development Limited, Bangalore.

**PREAMBLE :**

In the Government order read at (1) above, sanction has been accorded for implementation of 5.00 MW capacity Wind Power Project at Channenadaddi, Jainapur, Chikkodi, Chinchani of Belgaum District to M/s Sun Power India.

In the Government Order read at (2) above, sanction has been accorded for the enhancement of wind power capacity Area-B from 2.00 MW to 15.00 MW in favour of M/s Sun Power India.

Now, the Managing Director, Karnataka Renewable Energy Development Limited, Bangalore in his letter read at (3) above has recommended to the Government for transfer of 15.00 MW Wind Power capacity in favour of M/s Doddanavar Brothers at Channenadaddi Village, Chikkodi Taluk, Belgaum District from M/s Sun Power India.

The proposal has been examined and hence the following order:

**GOVERNMENT ORDER NO: EN 27 NCE 2009, BANGALORE, DATED: 12th February 2009.**

Government is pleased to accord approval for transfer of 15.00 MW Wind Power capacity in favour of M/s Doddanavar Brothers at Channenadaddi Village, Chikkodi Taluk, Belgaum District from M/s Sun Power India as detailed below:

| **Geographical Area Details** |
|---|
| **Area-'B'-(2 MW):** A plateau with 764m peak is located on the North-West of Channenadaddi village and situated on the South-West of Chikodi a distance about 3.5 km and is a non-Forest area. The proposed area is covered in the following Geographical co-ordinates:<br>**Latitude**: 16°23'33"- 16°24'31" N<br>**Longitude**: 74°33'0"- 74°33'50" E<br>**Ridge peaks:** 764m Amsl.<br>**Toposheet No: 47L/11** |

The terms and conditions of the Government Order read at (1) above shall **IPSO FACTO** applicable.

By order and in the Name of Governor of Karnataka,

P.R. 631

**S.J. SAMPATH KUMAR**

Under Secretary to Government, Energy Department

**ಇಂಧನ ಸಚಿವಾಲಯ**

**ವಿಷಯ:** ಮೆ:: ಬೊಬ್ಬ ಪವರ್ ಪ್ರಾಜೆಕ್ಟ್ ಕಂಪನಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಪುಚ್ಚಮೊಗರು ಹೊಳೆಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಂಇ 242 ಎನ್‌ಸಿಇ 2002 ದಿನಾಂಕ: 8.10.2002.
2) ಸರ್ಕಾರಿ ಆದೇಶ ಸಂಖ್ಯೆ: ಇಂಇ 242 ಎನ್‌ಸಿಇ 2003 ದಿನಾಂಕ: 7.5.2003.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 270 ಎನ್‌ಸಿಇ 2007 ದಿನಾಂಕ: 3.3.2008.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/06/ಮನ್ನಪಿಟ್ಲು/2008/1927 ದಿನಾಂಕ: 14/18.11.2008.
5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/06/ಮನ್ನಪಿಟ್ಲು/09/219 ದಿನಾಂಕ: 19/27.1.2009.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಮೆ :: ಬೊಬ್ಬ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಪುಚ್ಚಮೊಗರು ಹೊಳೆಗೆ ಅಡ್ಡಲಾಗಿ 9.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 9.00 ಮೆಗಾ ವ್ಯಾಟ್‌ನಿಂದ 15.00 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ: 17.10.2007 ರಿಂದ 16.10.2008 ರವರೆಗೆ ವಿಸ್ತರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಮಾರ್ಚ್ ಮತ್ತು ಏಪ್ರಿಲ್ 2008 ರ ಅವಧಿಯಲ್ಲಿ ಭಾರಿ ಮಳೆ ಇದುದ್ದರಿಂದ, ಉಕ್ಕು ಮತ್ತು ಸಿಮೆಂಟಿನ ಬೆಲೆಯಲ್ಲಿ ಏರಿಕೆಯಾಗಿರುವುದರಿಂದ, ಯಂತ್ರೋಪಕರಣಗಳ ಪೂರೈಕೆಯಲ್ಲಿ ವಿಳಂಬವಾಗಿರುವುದರಿಂದ ಹಾಗೂ ಪ್ರಸರಣ ಮಾರ್ಗದಲ್ಲಿ ಬರುವ ಮರಗಳನ್ನು ಕಡಿಯಲು ಅನುಮತಿಸಿಗಲು ವಿಳಂಬವಾಗಿರುವ ಹಿನ್ನೆಲೆಯಲ್ಲಿ, ಯೋಜನೆಯನ್ನು ನಿಗಧಿತ ಅವಧಿಯಲ್ಲಿ ಪ್ರಾರಂಭಿಸಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಅನುಷ್ಠಾನದ ಕಾಲಾವಧಿಯನ್ನು ದಿನಾಂಕ: 15.4.2009 ರವರೆಗೆ ವಿಸ್ತರಿಸಲು ಪರಿಗಣಿಸುವಂತೆ ಕೋರಿದ್ದಾರೆ.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಸಾಕಷ್ಟು ಪ್ರಗತಿ ಸಾಧಿಸಿರುವ ಹಿನ್ನೆಲೆಯಲ್ಲಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಜುಲೈ 2009 ರವರೆಗೆ ವಿಸ್ತರಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿ, ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 416 ಎನ್‌ಸಿಇ 2008, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2009.**

ಮೆ:: ಬೊಬ್ಬ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಪುಚ್ಚಮೊಗರು ಹೊಳೆಗೆ ಅಡ್ಡಲಾಗಿ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು **ದಿನಾಂಕ: 17.10.2008 ರಿಂದ ದಿನಾಂಕ : 31.7.2009 ರ ಅವಧಿಗೆ ವಿಸ್ತರಿಸಲಾಗಿದೆ.**

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 808

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

**ವಿಷಯ:** ಮೆ:: ಆದರ್ಶ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ತೊಕಾಪುರ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಂಇ 396 ಎನ್‌ಸಿಇ 2004 ದಿನಾಂಕ: 21.12.2004.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ತೋಕಾಪೂರ/09/074 ದಿನಾಂಕ: 7/9.1.2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಆದರ್ಶ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶಹಪುರ ತಾಲ್ಲೂಕಿನ ಎನ್.ಎಲ್.ಬಿ.ಸಿ. ಯ ಶಹಪುರ ಬ್ರಾಂಚ್ ಕೆನಾಲ್‌ಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ತೊಕಾಪುರ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಅಭಿವೃದ್ಧಿದಾರರು ಕಳೆದ 4 ವರ್ಷಗಳಿಂದ ನೀರಿನ ಅಳತೆ ಮಾಡುವುದರಿಂದಾಗಿ ಕಾಮಗಾರಿ ವಿಳಂಬವಾಗಿದೆ ಎಂದು ತಿಳಿಸಿರುವ ಹಿನ್ನೆಲೆಯಲ್ಲಿ, ಸದರಿ ಯೋಜನೆಯ ಅನುಷ್ಠಾನದ ಕಾಲಾವಧಿಯನ್ನು ಇನ್ನೂ 1 ವರ್ಷದವರೆಗೆ ವಿಸ್ತರಿಸುವಂತೆ ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 33 ಎನ್‌ಸಿಇ 2009, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2009.**

ಮೆ:: ಆದರ್ಶ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶಹಪುರ ತಾಲ್ಲೂಕಿನ ಎನ್.ಎಲ್.ಬಿ.ಸಿ. ಯ ಶಹಪುರ ಬ್ರಾಂಚ್ ಕೆನಾಲ್‌ಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 2.00 ಮೆಗಾ ವ್ಯಾಟ್ ಸಾಮರ್ಥ್ಯದ ತೊಕಾಪುರ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನದ ಕಾಲಾವಧಿಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಇನ್ನೂ 1 (ಒಂದು) ವರ್ಷದವರೆಗೆ ವಿಸ್ತರಿಸಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಸರ್ಕಾರಿ ಆದೇಶ ಸಂಖ್ಯೆ: ಇಂಇ 396 ಎನ್‌ಸಿಇ 2004 ದಿನಾಂಕ: 21.12.2004 ರ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 601

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

**ವಿಷಯ:** ಮೆ: ಆರ್.ಆರ್.ಬಿ. ಎನರ್ಜಿ ಲಿಮಿಟೆಡ್ (ಮೊದಲ ಹೆಸರು ಮೆ: ವೆಸ್ಟಾಸ್ ಆರ್.ಆರ್.ಬಿ. (ಐ) ಲಿಮಿಟೆಡ್) ಕಂಪನಿಯವರು ತಮ್ಮದಲ್ಲದ ಭೂಮಿಯಲ್ಲಿ ವಿದ್ಯುತ್ ಉತ್ಪಾದನೆ ಮಾಡಿರುವ ಪ್ರಯುಕ್ತ ರೂ. 25.00 ಲಕ್ಷವನ್ನು ದಂಡ ವಿಧಿಸುವ ಬಗ್ಗೆ.

**ಓದಲಾಗಿದೆ:** 1) ಕೆ.ಆರ್.ಇ.ಡಿ.ಎಲ್.ನ ಪತ್ರ ಸಂಖ್ಯೆ: ಕೆಆರ್‌ಇಡಿ/08/ ವಿಆರ್‌ಆರ್‌ಬಿ–ವಿಓಎಲ್–II/ 2008/2126, ದಿನಾಂಕ:12/15–12–2008.

2) ಕೆ.ಆರ್.ಇ.ಡಿ.ಎಲ್.ನ ಪತ್ರ ಸಂಖ್ಯೆ: ಕೆಆರ್‌ಇಡಿ/08/ ವಿಆರ್‌ಆರ್‌ಬಿ–ವಿಓಎಲ್–II/ 2008/030, ದಿನಾಂಕ:03/05–01–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ಮತ್ತು (2)ರ ಪತ್ರದಲ್ಲಿ, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಮೆ: ಆರ್.ಆರ್.ಬಿ. ಎನರ್ಜಿ ಲಿಮಿಟೆಡ್ (ಮೊದಲ ಹೆಸರು ಮೆ: ವೆಸ್ಟಾಸ್ ಆರ್.ಆರ್.ಬಿ. (ಐ) ಲಿಮಿಟೆಡ್) ಕಂಪನಿಯವರು ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಕುಂದೂರು ಗ್ರಾಮದ ಸರ್ವೆ ನಂ.24ರಲ್ಲಿ ಮೆ: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಯವರಿಗೆ ಪವನ ವಿದ್ಯುತ್ ಯೋಜನೆಗಾಗಿ ಉಪ ಗುತ್ತಿಗೆಗೆ ನೀಡಬೇಕಾಗಿರುವ 11.5 ಎಕರೆ ಕಂದಾಯ ಭೂಮಿಯು ಕೆ.ಆರ್.ಇ.ಡಿ.ಎಲ್.ನ ಸುಪರ್ದಿನಲ್ಲಿದ್ದುದನ್ನು ಅಕ್ರಮವಾಗಿ ಉಪಯೋಗಿಸಿ, ಗಾಳಿ ವಿದ್ಯುತ್ ಕಂಬಗಳನ್ನು ನೆಟ್ಟು, ವಿದ್ಯುತ್ ಉತ್ಪಾದಿಸಿ ಮೆಸ್ಕಾಂ ಗ್ರಿಡ್‌ಗೆ ಸರಬರಾಜು ಮಾಡಿರುವ ಬಗ್ಗೆ ಪ್ರಸ್ತಾಪಿಸಿ ಅವರು ಕೈಗೊಂಡಿರುವ ಕ್ರಮವು ಕಾನೂನುಬಾಹಿರವಾಗಿದ್ದು, ರೂ.10.5 ಲಕ್ಷವನ್ನು ದಂಡ ವಿಧಿಸಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸ್ಥಳವನ್ನು ಎರಡೂ ಕಂಪನಿಗಳ ಸಮ್ಮುಖದಲ್ಲಿ ಕೆ.ಆರ್.ಇ.ಡಿ.ಎಲ್.ನ ಅಧಿಕಾರಿಗಳು ಜಂಟಿ ಪರಿವೀಕ್ಷಣೆ ನಡೆಸಿ ವರದಿಯನ್ನು ನೀಡಿರುತ್ತಾರೆ. ಮೆ: ಆರ್.ಆರ್.ಬಿ. ಎನರ್ಜಿ ಲಿಮಿಟೆಡ್ (ಮೊದಲ ಹೆಸರು ಮೆ: ವೆಸ್ಟಾಸ್ ಆರ್.ಆರ್.ಬಿ. (ಐ)

ಲಿಮಿಟೆಡ್) ಕಂಪನಿಯವರು ತಮಗೆ ಉಪ ಗುತ್ತಿಗೆಯಾಗದಿರುವ ಹಾಗೂ ಯಾರಿಗೂ ಹಂಚಿಕೆಯಾಗದಿರುವ ಸದರಿ ಸ್ಥಳದಲ್ಲಿ ಆರು ಪವನ ವಿದ್ಯುತ್ ಜನಕಗಳನ್ನು ಅಳವಡಿಸಿ, ವಿದ್ಯುತ್ತನ್ನು ಉತ್ಪಾದಿಸಿ ಮೆಸ್ಕಾಂ ಗ್ರಿಡ್‌ಗೆ ವಿದ್ಯುತ್ತನ್ನು ಸರಬರಾಜು ಮಾಡಿರುತ್ತಾರೆ. ಸದರಿ ಕಂಪನಿಯು ತನಗೆ ಹಂಚಿಕೆಯಾಗಿಲ್ಲದ ಸ್ಥಳದಲ್ಲಿ ಅಕ್ರಮವಾಗಿ ಗಾಳಿ ವಿದ್ಯುತ್ ಕಂಬಗಳನ್ನು ಅಳವಡಿಸಿರುವುದನ್ನು ಒಪ್ಪಿಕೊಂಡಿರುತ್ತಾರೆ.

ಮೆ: ಆರ್.ಆರ್.ಬಿ. ಎನರ್ಜಿ ಲಿಮಿಟೆಡ್‌ರವರು ತನಗೆ ಹಂಚಿಕೆಯಾಗಿಲ್ಲದೇ ಇರುವ ಸ್ಥಳದಲ್ಲಿ ತಪ್ಪಾಗಿ ಆರು ಪವನ ವಿದ್ಯುತ್ ಜನಕಗಳನ್ನು ಅಳವಡಿಸಿರುವುದನ್ನು ಒಪ್ಪಿಕೊಂಡಿರುವುದರಿಂದ ಮತ್ತು ಇದಕ್ಕಾಗಿ ಕೆ.ಆರ್.ಇ.ಡಿ.ಎಲ್.ನ ವ್ಯವಸ್ಥಾಪಕ ನಿರ್ದೇಶಕರು ರೂ.10.5 ಲಕ್ಷಗಳ ದಂಡ ವಿಧಿಸಲು ಶಿಫಾರಸ್ಸು ಮಾಡಿರುವುದನ್ನು ಪರಿಶೀಲಿಸಿ, ಈ ಪ್ರಕರಣದಲ್ಲಿ ಸದರಿ ಕಂಪನಿಯು ಭಾಗಿಯಾಗಿದ್ದು, ತಪ್ಪಿಸಬಹುದಾಗಿದ್ದ ಅನಾನುಕೂಲಕ್ಕೆ ದಂಡವನ್ನು ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 422 ಎನ್‌ಸಿಇ 2008, ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2009**

ಮೆ: ಆರ್.ಆರ್.ಬಿ. ಎನರ್ಜಿ ಲಿಮಿಟೆಡ್ (ಮೊದಲ ಹೆಸರು ಮೆ: ವೆಸ್ಟಾಸ್ ಆರ್.ಆರ್.ಬಿ. (ಐ) ಲಿಮಿಟೆಡ್) ಕಂಪನಿಯವರು ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಕುಂದೂರು ಗ್ರಾಮದ ಕಂದಾಯ ಜಮೀನು ಸರ್ವೆ ನಂ.24ರಲ್ಲಿ ಅನಧಿಕೃತವಾಗಿ ತಮಗೆ ಉಪ ಗುತ್ತಿಗೆ ಆಗದಿರುವ ಭೂಮಿಯಲ್ಲಿ ಆರು ಪವನ ವಿದ್ಯುತ್ ಜನಕಗಳನ್ನು ಅಳವಡಿಸಿ ವಿದ್ಯುತ್ತನ್ನು ಉತ್ಪಾದಿಸುತ್ತಿರುವುದರಿಂದ, ಸದರಿ ಕಂಪನಿಗೆ ಪರವಾನಿಗೆ ಪಡೆಯದೆ ಕೈಗೊಂಡಿರುವ ಕ್ರಮಕ್ಕೆ ರೂ.25.00 ಲಕ್ಷಗಳ (ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ದಂಡವನ್ನು ವಿಧಿಸಲಾಗಿದೆ.

ಸದರಿ ದಂಡದ ಮೊತ್ತವನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಪಾವತಿಸತಕ್ಕದ್ದು. ಈ ದಂಡದ ಮೊತ್ತವನ್ನು ನವೀಕರಿಸಬಹುದಾದ ಇಂಧನ ಅಭಿವೃದ್ಧಿಗಾಗಿ ಸರ್ಕಾರದಿಂದ ಹೊರಡಿಸಲಾಗುವ ಮಾರ್ಗಸೂಚಿಯನ್ವಯ ಬಳಸಿಕೊಳ್ಳತಕ್ಕದ್ದು.

ದಂಡ ಪಾವತಿಯೊಂದಿಗೆ ಸದರಿ ಕಂಪನಿಯು ಜಮೀನು ದೊರಕಿಸಿಕೊಳ್ಳಲು ಅನುಸರಿಸಬೇಕಾದ ಕ್ರಮವನ್ನು ಚಾಚೂತಪ್ಪದೆ ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 632

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಕಸಂವಾಪ್ರ 137 ಕಸನಿ 2008, ಬೆಂಗಳೂರು, ದಿನಾಂಕ: 15ನೇ ಜನವರಿ 2009**

ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 137 ಕಸನಿ 2008, ದಿನಾಂಕ 1–1–2009ರಲ್ಲಿನ "ಕಾರ್ಯಪಾಲಕ ಅಭಿಯಂತರರು, ನಂ. 7, ಕಟ್ಟಡಗಳ ಉಪ ವಿಭಾಗ, ಲೋಕೋಪಯೋಗಿ ಇಲಾಖೆ, ಬೆಂಗಳೂರು" ಎಂದಿರುವುದನ್ನು "ಕಾರ್ಯಪಾಲಕ ಅಭಿಯಂತರರು, ನಂ. 2, ಕಟ್ಟಡಗಳ ವಿಭಾಗ, ಲೋಕೋಪಯೋಗಿ ಇಲಾಖೆ, ಬೆಂಗಳೂರು" ಎಂದು ದಿ: 1–1–2009 ರಿಂದಲೇ ಜಾರಿಗೆ ಬರುವಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 481

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಒಇ 354 ಪೊಸಿಪ 2008, ಬೆಂಗಳೂರು, ದಿನಾಂಕ 31ನೇ ಜನವರಿ 2009**

ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 347 ಪೊಸಿಪ 2007, ದಿ: 7–11–2007ರಲ್ಲಿ ಕ್ರಮ ಸಂಖ್ಯೆ: 79ರಲ್ಲಿನ "ಎನ್.ಸಿ. ಬೂದಿಹಾಳ್, ಡಿವೈ.ಎಸ್.ಪಿ." ಎಂಬುದರ ಬದಲು "ಎಂ.ಸಿ. ಬೂದಿಹಾಳ್, ಡಿವೈ.ಎಸ್.ಪಿ." ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 451

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)